# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮು,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು
ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ
ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ,
(ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು
ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ
ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ
(ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ,
ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ
(ಆರ್ಜಿತ) ಶುದ್ಧಿ, 2ನೇ ಅರ್ಚನೆ.
,, 8–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ (ಆರ್ಜಿತ)

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ
ಕೈಂಕರ್ಯಗಳು
,, 5–00 ರಿಂದ 7–00 ವರೆಗೆ ಅಭಿಷೇಕ (ಆರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು
ಅರ್ಚನೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ತೋಮಾಲಸೇವೆಯಲ್ಲಿ ಒಬ್ಬರಿಗೆ 100/– ರೂ ಟಿಕೆಟ್, ಅರ್ಚನೆಯಲ್ಲಿ ಒಬ್ಬರಿಗೆ 100/– ರೂ ಟಿಕೆಟ್ ಏಕಾಂತಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಪಡೆದಲ್ಲಿ ಪ್ರವೇಶಾವಕಾಶವುಂಟು.

3. ಸರ್ಕಾರ್ ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಉಯ್ಯಾಲೆಸೇವೆ, ವಾಹನ ಸೇವೆಗಳು, ಮಂಗಳವಾರದಲ್ಲಿ ಪ್ಲವೋತ್ಸವ ಮಧ್ಯಾಹ್ನ 1–00 ರಿಂದ 7–00 ನಡುವೆ ಜರುಗುವುವು.



ಶ್ರೀಶ ನೀನಹುದೋ ಶೇಷಾಚಲವಾಸ ನೀನಹುದೊ ॥
॥ ಪಲ್ಲವಿ ॥

ಶೇಷ ಶಯನ ಸುರೇಶವಂದಿತಾಶೇಷ ಜನರ ಪಾಲಿಸಿ ಬಡ್ಡಿ
ಕಾಸು ಸೇರಿಸಿ ಗಂಟು ಕಟ್ಟುವ ಕ್ಯಾಸಕ್ಕಿ ತಿಮ್ಮಪ್ಪ ನೀನೆ ॥
॥ ಅ.ಪ. ॥

ತಂದೆ ನಿನಹುದೋ ಕರುಣಾ ಸಿಂಧು ನೀನಹುದೊ
ಅಂದು ದ್ರುಪದ ನಂದನೆಯು ಎಳೆತಂದು –
ಘಾಸಿಯ ಮಾಡುತಿರಲು
ಮುಂದೆ ಬಂದು ಅಕ್ಷಯವೆಂದು ಸಲಹಿದ –
ಮಂದಹಾಸ ಮುಕುಂದನು ನೀನೆ ॥ ೧ ॥

ಧೀರ ನೀನಹುದೋ ಜಗದೋದಾರ ನೀನಹುದೊ
ಬಾರಿ ಬಾರಿಗೆ ನಿನ್ನ ಪಾದ ಸುವಾರಿಜಂಗಳ ಸೇರಿದ ಭಕ್ತರ
ಘೋರ ದುರಿತವ ದೂರಗೈಸುವ ಮಾರಜನಕ –
ಅಪಾರ ಮಹಿಮನೆ ॥ ೨ ॥

ಧನ್ಯ ನೀನಹುದೊ ಸುರ ಮುನಿ ಮಾನ್ಯ ನೀನಹುದೊ
ಪನ್ನಗಾರಿವಾಹನ ಧರೆಯೊಳು ಇನ್ನು –
ನಿನಗೆದುರಾರ ಕಾಣೆ ಪ್ರ
ಸನ್ನನಾಗಲೊ ಬಿನ್ನಹ ಕೇಳು ಪ್ರಸನ್ನ ವತ್ಸಲ
ಶ್ರೀ ಹಯವದನ ॥ ೩ ॥

— ಶ್ರೀ. ವಾದಿರಾಜರು

ಸಂದರ್ಶಿಸಿ! ಅನುಗ್ರಹೀತರಾಗಿರಿ !!

# ಶ್ರೀ ವೇದನಾರಾಯಣಸ್ವಾಮಿ ದೇವಾಲಯ





# ನಾಗಲಾಪುರಂ

## ವಾರ್ಷಿಕ ಬ್ರಹ್ಮೋತ್ಸವ ಕಾರ್ಯಕ್ರಮ

ದಿನಾಂಕ 27—4—83 ರಿಂದ 5—5—83 ವರೆಗೆ

| | | |
|---|---|---|
| 27—4—83 | ಬುಧವಾರ | ಬ್ರಹ್ಮೋತ್ಸವಾರಂಭ, ಧ್ವಜಾರೋಹಣ |
| 1—5—83 | ಭಾನುವಾರ | ಗರುಡೋತ್ಸವ |
| 4—5—83 | ಬುಧವಾರ | ರಥೋತ್ಸವ |
| 5—5—83 | ಗುರುವಾರ | ಚಕ್ರಸ್ನಾನ |

ಸೂಚನೆ :– ನಾಗಲಾಪುರ ತಿರುಪತಿಯಿಂದ 65 ಕಿ. ಮಿ. ದೂರದಲ್ಲಿದೆ. ತಿರುಪತಿಯಿಂದ ವಾಹನ ಸೌಕರ್ಯವುಂಟು. ಬ್ರಹ್ಮೋತ್ಸವ ಸಮಯದಲ್ಲಿ ದಿನವೂ ವಿಶೇಷ ಕಾರ್ಯಕ್ರಮಗಳಿರುವುವು.

ನೀವೂ ಬನ್ನಿ, ನಿಮ್ಮವರನ್ನೂ ಕರೆತನ್ನಿ.

ತಿ. ತಿ. ದೇ.



ಗೌರವ ಸಂಪಾದಕರು :
ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಬಿ. ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**



ಸಂಪುಟ ೧೩] ಮಾರ್ಚ್ ೧೯೮೩ [ಸಂಚಿಕೆ ೧೦

# ವಿಷಯಸೂಚಿ

ಕಾಮುದಂ ಚ ಮೇ ವೇದನಂ ಚ ಮೇ, ವೈಭವಂ ಚ ಮೇ ಜೀವನಂ ಚ ಮೇ ... " ಆಕೆಯನ್ನು ಕುರಿತು ಹಾಡಲು ಆರಂಭಿಸಿದಾಗ ಚಿಂತಾಮಣಿಯು ದುಃಖದಿಂದ "ಸ್ವಾಮಿಾ ತಾವು ಸತ್ಕುಲ ಪ್ರಸೂತರು. ನಾನು ಹುಟ್ಟಿನಲ್ಲಿ ವೇಶ್ಯೆ ಪಾಪಿಷ್ಠಳು. ತಾವು ಇತರರಿಗೆ ಮಾರ್ಗದರ್ಶಕರಾಗಬೇಕಾದವರು. ದೇವರಲ್ಲಿ ಭಕ್ತಿಯನ್ನು ಪ್ರಜ್ವಲಿಸುವಂತೆ ಮಾಡಬೇಕಾದವರು. ನನ್ನನ್ನು ಕುರಿತು ಹಾಡಿದ ಹಾಡನ್ನೇ ದೇವರನ್ನು ಕುರಿತು ಹಾಡಬಾರದೆ? ಅಲ್ಲಿ ನೋಡಿ ಗಿರಿಧರ ಗೋಪಾಲನ ವಿಗ್ರಹ. ಕಮನೀಯ ಕಿಶೋರನ ಕಂಗೊಳಿಸುವ ರೂಪ. ಅವನ ಸಾನ್ನಿಧ್ಯದಲ್ಲಿ ಅನನ್ಯ ಭಕ್ತಿಯ ಗಂಗೆಯಲ್ಲಿ ಮಿಂದು ಹರಿನಾಮ ಸಂಕೀರ್ತನೆಯನ್ನು ಮಾಡುತ್ತಾ ಜಗಕ್ಕೆಲ್ಲಾ ಭಕ್ತಿಯ ತತ್ತ್ವವನ್ನು ಸಾರುತ್ತಾ, ಮುಕ್ತಿಯೆಂಬ ವರ ಕನ್ಯೆಯನ್ನು ವರಿಸಿ ಭವಸಾಗರವೆಂಬ ಸಂಸಾರವನ್ನು ಕೃಷ್ಣ ಪ್ರೇಮವೆಂಬ ನಾವೆಯಿಂದ ದಾಟಬಾರದೆ? ನಶಿಸಿ ಹೋಗುವ ನನ್ನೀ ಸೌಂದರ್ಯ, ಚಿದಾನಂದ ಚಿನ್ಮಯ ಸ್ವರೂಪವನ್ನು ಭಾವುಕರಿಗೆ ತೋರುವ ಆ ಗಿರಿಧರನ ಸೌಂದರ್ಯವನ್ನು ಕಂಡು ನಾಚಬಾರದೆ? ಸ್ವಾಮಿಾ, ಸೆರಗೊಡ್ಡಿ ಬೇಡುವೆ. ಈ ದಿನದಿಂದ ನಾನು ನನ್ನ ಹೆತ್ತತಾಯಿಯಾಣೆ ನಿಮ್ಮನ್ನು ಮುಟ್ಟುವುದಿಲ್ಲ. ನೀವು ನನ್ನನ್ನು ಮುಟ್ಟಿದರೆ ನಿಮ್ಮ ಹೆತ್ತ ತಾಯಿಯಾಣೆ" ಎಂದು ಅಳಲು ಉಪಕ್ರಮಿಸಿದಳು. ಲೀಲಾಶುಕನು ಚಿಂತಾಮಣಿ ಮುಖವನ್ನು ಕಂಡಾಗ ತನ್ನ ತಾಯಿಯನ್ನು ಕಂಡಂತೆ ಭಾಸವಾಯಿತು. ಅವನಲ್ಲಿ ಯಾವುದೋ ದೈವಿಕಶಕ್ತಿ ಹರಿದಂತಾಯಿತು. ವಿವೇಕ ತಲೆದೋರಿತು. ಕತ್ತಲಿನಿಂದ ಬೆಳಕಿಗೆ ಬಂದಂತಾಯಿತು ತನ್ನ ಮನೋಚಾಂಚಲ್ಯದ ಅರಿವಾಯಿತು. ಜ್ಞಾನ ಜ್ಯೋತಿಯನ್ನು ನೀಡಿದ ಈ ಮಾತೆ ತನ್ನ ಇಹಪರ ಲೋಕಗಳಿಗೆ ದಾರಿ ತೋರಿದ ಪ್ರಸೂತೆ ಎಂಬ ಭಾವ ಬಂದು ಪ್ರಪಂಚದ ಸುಖದ ಮೇಲೆ ವೈರಾಗ್ಯ ಹುಟ್ಟಿತು. "ಗೋವಿಂದಾ, ದಾಮೋದರಾ, ಮಾಧವಾ" ಎಂದು ಕೂಗುತ್ತಾ ಆ ಮಳೆಯಲ್ಲೇ ಹೊರಟ. ಎಲ್ಲಿಗೋ ಹೊರಟ. ಜೋರಾಗಿ ನಡೆದ. ಓಡಿದ. ಹುಚ್ಚನಾಗಿ, ಮಿಂಚಿನಂತೆ ನಡೆದ. ಅನ್ನ ಆಹಾರ ನೀರು, ನೆಳಲು ಇಲ್ಲದೆ ಕೃಷ್ಣ ನಾಮಸ್ಮರಣೆ ಮಾಡುತ್ತಾ ಕಾಡು ಮೇಡುಗಳಲ್ಲಿ ಬಳಲಿ ಬೆಂಡಾಗಿ ಓಡಿದ. ಅಂಧಕಾರ, ಶೂನ್ಯ, ಮಾಯೆ ನೀರಸ, ಬೇಸರ, ಜಿಗುಪ್ಸೆಗಳಿಂದ ತುಂಬಿದ ಲೀಲಾಶುಕನ ಜೀವನದಲ್ಲಿ ಕೃಷ್ಣನ ನಾದಲೀಲೆ ನರ್ತಿಸಲಾರಂಭಿಸಿತು. ಹಲವು ದಿನಗಳ ತರುವಾಯ ಬೃಂದಾವನಕ್ಕೆ ಬಂದು ಸೇರಿದ ಅನಂತ ವಿಪ್ಲವಕ್ಕೆ ಸಿಕ್ಕಿದ ಅವನ ಜೀವನಕ್ಕೆ ಬೃಂದಾವನದಲ್ಲಿ ಶಾಂತಿ ದೊರಕಿತು. ಚಿಂತಾಮಣಿ ಹೇಳಿದ ವಾಕ್ಯಗಳು ಜ್ಞಾಪಕಕ್ಕೆ ಬಂದವು. ಆಕೆಯ ಆದೇಶದಂತೆ ಕೃಷ್ಣನನ್ನು ಎಡೆಬಿಡದೆ ಧ್ಯಾನಿಸುತ್ತಿರಲು ಒಮ್ಮೆ ಶ್ರೀಕೃಷ್ಣನ ದಿವ್ಯ ತೇಜಸ್ಸು ಅವನ ದೇಹದಲ್ಲಿ ಹರಿದಂತಾಯಿತು. ಅಗೋಚರವಾದ ಅನೇಕ ವಿಷಯಗಳು ಅವನ ಮನಸ್ಸಿಗೆ ಬಂದಂತಾಯಿತು. ಕೃಷ್ಣನ ಬಾಲಲೀಲೆಗಳು ಅವನ ಮುಂದೆ ಬಂದು ಹಾದು ಹೋದವು. ಭಕ್ತಿ ಪರವಶನಾಗಿ ಕೃಷ್ಣ ಕರ್ಣಾಮೃತವೆಂಬ ದಿವ್ಯ ಕಾವ್ಯವನ್ನು ರಚಿಸಲಾರಂಭಿಸಿದನು. ಆ ಸಮಯಕ್ಕೆ ಚಿಂತಾಮಣಿಯೂ ಕೂಡ ಸನ್ಯಾಸಿನಿಯಾಗಿ ಎಲ್ಲವನ್ನೂ ತೊರೆದು ಲೀಲಾಶುಕನ ಯೋಗಕ್ಷೇಮವನ್ನು ತಿಳಿಯಲು ಯಾರಿಂದಲೋ ಅರಿತು ಬೃಂದಾವನಕ್ಕೆ ಬಂದು ಲೀಲಾಶುಕನ ಭಕ್ತವೃಂದದ ಮಧ್ಯೆ ಅವನ ಶ್ರೀಕೃಷ್ಣ ಕರ್ಣಾಮೃತ ಕಾವ್ಯವನ್ನು ಕೇಳುವ ಭಾಗ್ಯವನ್ನೂ ಪಡೆದಳು. ಲೀಲಾಶುಕ ತನ್ನ ಕಾವ್ಯ ರಚನೆಯನ್ನು ಮಾಡುವಾಗ ಮೊದಲನೆಯ ಮಂಗಳ ಶ್ಲೋಕದಲ್ಲಿ ಚಿಂತಾಮಣಿಯನ್ನು, ತನ್ನ ಗುರುವಾದ ಸೋಮಗಿರಿಯನ್ನು ಹೀಗೆಂದು ಸ್ಮರಿಸಿದ್ದಾನೆ.

ಚಿಂತಾಮಣಿರ್ಜಯತಿ
ಸೋಮಗಿರಿರ್ಗುರುರ್ಮೇ
ಶಿಕ್ಷಾಗುರುಶ್ಚ ಭಗವಾ೯
ಶಿಖಿಪಿಂಛಮೌಳಿಃ ।
ಯತ್ಪಾದಕಲ್ಪತರುಪಲ್ಲವಶೇಖರೇಷು
ಲೀಲಾಸ್ವಯಂ ವರರಸಂ
ಲಭತೇ ಜಯಶ್ರೀಃ ॥

ಈ ಶ್ಲೋಕದಲ್ಲಿ ತಪ್ಪು ಹಾದಿಹಿಡಿದ ತನ್ನನ್ನು ತಿದ್ದಿ ಭಗವತ್ ಪ್ರೇಮದ ಕಡೆ ತಿರುಗಿಸಿದ ಚಿಂತಾಮಣಿ ಸ್ಮರಣೆ ಉಪಕಾರಸ್ಮೃತಿ, ತನ್ನ ವಿದ್ಯಾಗುರು ಸೋಮಗಿರಿಯವರ ಸ್ಮರಣೆ. ಅಂತೆಯೇ ತನ್ನ ಆರಾಧ್ಯ ದೇವತೆ ಭಗವಾನ್ ಶಿಖಿಪಿಂಛಮೌಳಿಗಳನ್ನು ಸ್ಮರಿಸಿದ್ದಾನೆ. ಕೃಷ್ಣ ಕರ್ಣಾಮೃತ' ಕಾವ್ಯಕ್ಕೆ ಕರ್ಣಾನಂದ ಪ್ರಕಾಶಿನೀ, ಶೃಂಗಾರ ರಂಗದಾ, ಕೃಷ ವಲ್ಲಭಾ, ಸುಬೋಧಿನೀ– ಎಂಬ ಹಲವಾರು ವ್ಯಾಖ್ಯಾನಗಳುಂಟು. ಸಂತ ಸೂರದಾಸರು

*Statement about ownership and other particulars about*

## SAPTHAGIRI (MONTHLY)

FORM IV

( *See Rule* 8)

| | | | |
|---|---|---|---|
| 1 | Place of publication | . | TIRUPATI |
| 2 | Periodicity of its publication | ... | Monthly |
| 3 | Honorary Editor | . | Sri G Kumaraswamy Reddy, I.A.S Executive Officer, T.T.D |
| 4 | Printer's Name<br>(Whether citizen of India )<br>Address | ..<br>. .<br>.. | Sri M. Vijayakumar Reddy, L.P.T.,<br>Yes<br>Manager, T.T.D. Printing Press, Tirupati. |
| 5 | Editor & Publisher's Name<br>(Whether citizen of India )<br>Address | ..<br>... | K. Subba Rao, M.A ,<br>Yes<br>Editor, Sapthagiri, T.T.D. Journal, Tirupati. |
| 6 | Names and addresses of individuals who own the Newspaper and partners or shareholders holding more than one per cent of the total capital. | ...<br>... | Board of Trustees represented by the Executive Officer on behalf of T. T. D., Tirupati. |

*I, K. Subba Rao, hereby declare that the particulars given above are true to the best of my knowledge and belief.*

TIRUPATI,
*Date*: 26-2-1983.

(*Sd.*) **K. SUBBA RAO,**
*Signature of the Publisher.*

ಸಂತ ಪ್ರಭುಚೈತನ್ಯರು ಲೀಲಾಶುಕನ ಕೃಷ್ಣ ಕರ್ಣಾಮೃತಕ್ಕೆ ಮನ್ನಣೆ ನೀಡಿ ದಕ್ಷಿಣದ ಈ ಕಾವ್ಯವನ್ನು ಉತ್ತರದಲ್ಲಿ ಹರಡುವಂತೆ ಮಾಡಿದರು. ವೈಷ್ಣವ ಭಕ್ತಿ ಕಾವ್ಯಗಳಲ್ಲಿ ಮೂರು ಬಹು ಪ್ರಸಿದ್ಧವಾಗಿವೆ. ಒಂದನೆಯದು ಜಯದೇವ ಕವಿಯ ಗೀತಗೋವಿಂದ, ಎರಡನೆಯದು ಕುಲಶೇಖರರ ಮುಕುಂದಮಾಲೆ, ಮೂರನೆಯದು ಲೀಲಾಶುಕನ ಕೃಷ್ಣಕರ್ಣಾಮೃತ. ಲೀಲಾಶುಕನಿಗೆ ಬಿಲ್ವಮಂಗಳಾಚಾರ್ಯ ಎಂಬ ಮತ್ತೊಂದು ಹೆಸರೂ ಉಂಟು. ಕವಿಯ ಕಾಲ ಸುಮಾರು ೧೧ನೆಯ ಶತಮಾನವಿರಬೇಕು. ಕೃಷ್ಣನ ಬಾಲಲೀಲೆಗಳ ಮೇಲೆ ಕವಿಯ ಪ್ರೇಮ ಹೆಚ್ಚು. ಕದಂಬ ವೃಕ್ಷದ ಬುಡದಲ್ಲಿ ಆಡುತ್ತಿರುವ ವೇಣುವಿಲೋಲನಾದ ಶ್ರೀ ಕೃಷ್ಣನನ್ನು ಧ್ಯಾನಿಸುವ ಈ ಶ್ಲೋಕವನ್ನು ನೋಡಿ;

ಕದಂಬ ಮೂಲೇ ಕ್ರೀಡಂತಂ
ವೃಂದಾವನ ನಿವೇಶಿತಂ
ಪದ್ಮಾಸನ ಸ್ಥಿತಂ ವಂದೇ
ವೇಣು ಗಾಯಂತಮಚ್ಯುತಂ

ಸೂರ್ಯನಿಗಿಂತ ಕಾಂತಿಯುತವಾದ ಕಮಲಗಳನ್ನು ನಾಚಿಸುವ ನೇತ್ರಗಳುಳ್ಳ, ಮಾಧುರ್ಯಕ್ಕಿಂತ ಮಧುರವಾದ, ಚಾಪಲ್ಯಕ್ಕಿಂತ ಚಪಲವಾದ ಆಕಾರವುಳ್ಳ ಆ ಬಾಲಗೋಪಾಲನು ಕಮಲವೆಂಬ ತನ್ನ ಕಾಲು ಬೆರಳುಗಳನ್ನು ಮುಖವೆಂಬ ಕಮಲದೊಳಕ್ಕೆ ಇರಿಸಿಕೊಳ್ಳುತ್ತ ಬೆರಳನ್ನು ಚೀಪುವ ದೃಶ್ಯವನ್ನು ಕವಿ ಸಹಜವಾಗಿ ಹೃದಯಂಗಮವಾಗಿ ಚಿತ್ರಿಸಿರುವ ಈ ಶ್ಲೋಕ ನೋಡಿ;

ಕರಾರವಿಂದೇನ ಪದಾರವಿಂದಂ
ಮುಖಾರವಿಂದೇ ವಿನಿವೇಶಯಂತಂ
ವಟಸ್ಯ ಪತ್ರಸ್ಯ ಪುಟೇ ಶಯಾನಂ
ಬಾಲಂ ಮುಕುಂದಂ ಮನಸಾ ಸ್ಮರಾಮಿ

ಕ್ರಮವಾಗಿ ದಿನಗಳು ಕಳೆದು ಅಂಬೆಗಾಲಿಂದ ಓಡಾಡುವ ಶೃಂಗಾರನಿಧಿ ಶ್ರೀಕೃಷ್ಣನು ಎರಡು ಮಂಡಿಗಳಿಂದಲೂ ಗುಡಗುಡನೆ ಓಡುವಾಗ ಕಿರು ಗೆಜ್ಜೆಗಳು ಕಿಣಿಕಿಣಿ ಶಬ್ದವನ್ನು ಮಾಡುತ್ತಿರಲು ಅವನ ಸೊಂಟಕ್ಕೆ ಬಿಗಿದು ಕಟ್ಟಿದ ಬಂಗಾರದ ಒಡ್ಯಾಣವು ಕಣ್ಣುಗಳನ್ನು ಕೋರೈಸುತ್ತಿರಲು ಅಂತಹ ಶಿಶುವು ರತ್ನಗಳಿಂದ ಮಾಡಿದ ನೆಲದಲ್ಲಿ ನಲಿದಾಡುತ್ತಿರುವಾಗ ತನ್ನ ಪ್ರತಿಬಿಂಬವನ್ನು ಕಂಡು ಅದನ್ನು ಎತ್ತಿಕೊಳ್ಳಬೇಕೆಂಬ ಆಸೆಯುಳ್ಳವನಾಗಿ ತಾಯಿಯ ಮುಖವನ್ನು ಕಂಡು ಅಳತೊಡಗಿದನಂತೆ. ಕವಿಯ ಕಲ್ಪನೆ ಹಾಗೂ ಸ್ವಾಭಾವಿಕತೆಯನ್ನು ಈ ಕೆಳಗಿನ ಶ್ಲೋಕದಿಂದ ಗಮನಿಸಬಹುದು.

ರತ್ನಸ್ಥಲೇ ಜಾನು ಚರಃ ಕುಮಾರಃ
ಸಂಕ್ರಾಂತ ಮಾತ್ಮೀಯ ಮುಖಾರವಿಂದಂ
ಆದಾತು ಕಾಮಸ್ತದಲಾಭ ಖೇದಾತ್
ವಿಲೋಕ್ಯ ಧಾತ್ರೀವದನಂ ರುರೋದ

ಕವಿಯ ಚಿತ್ತದಲ್ಲಿ ಮಧುರ ಮುರಳೀ ಮಾಧುರೀ ಧೀರನಾದ, ಗೋ, ಗೋಪ, ಗೋಪೀ ಜನರನ್ನು ಇಂದ್ರಿಯ ಪರವಶವಾಗಿ ಮಾಡಿದ ಮುಗ್ಧವೂ ಸ್ನಿಗ್ಧವೂ ಆದ ವ್ಯಾಕುಲತ್ವ, ಅವರ ಮನಸ್ಸನ್ನು ತೀರ ಮೋಹಗೊಳಿಸಿದ ಶ್ಯಾಮ ಮೋಹನತ್ವ ಇವು ನಿತ್ಯವೂ ನೆಲಸಿದ್ದರಿಂದ ಲೀಲಾಶುಕನು ಬಾಲಗೋಪಾಲನ ಬಗ್ಗೆ–

ಉಪಾಸತಾಮಾತ್ಮವಿದಃ ಪುರಾಣಾಃ
ಪರಂ ಪರಸ್ತಾನ್ನಿಹಿತಂ ಗುಹಾಯಾಮ್
ವಯಂ ಯಶೋದಾಶಿಶು ಬಾಲಲೀಲಾ
ಕಥಾ ಸುಧಾ ಸಿಂಧುಷು ಲೀಲಯಾಮಃ

'ಆತ್ಮನನ್ನು ಕುರಿತು ಉಪಾಸನೆ ಮಾಡುವ ಋಷಿಗಳು ಹೃದಯದ ಅಂತರಾಳದಲ್ಲಿ ಅಡಗಿರುವ ಆ ಪರಾವಸ್ತುವನ್ನು ಉಪಾಸನೆಮಾಡಲಿ. ನಾವು ಯಶೋದೆಯ ಕಂದನನ್ನು ಆ ಕಮನೀಯ ಕಿಶೋರನ ಬಾಲಲೀಲಾ ಕಥಾ ಸಿಂಧುವಿನಲ್ಲಿ ಕ್ರೀಡಿಸೋಣ' ಎಂಬುದಾಗಿ ಹೇಳಿದ್ದಾನೆ.

ಬಾಲಗೋಪಾಲನ ಲೀಲೆ ತಾಯಿ ಯಶೋದೆಗೆ ಒಂದು ಮಹಾಭಾಗ್ಯ. ತಾಯಿ ಯಶೋದೆಯ ಸ್ಥಿತಿಯನ್ನು ಈ ಭಕ್ತಕವಿ ಬಹು ಹೃದಯಂಗಮವಾಗಿ ಚಿತ್ರಿಸಿದ್ದಾನೆ. ಭುವನೈಕಸುಂದರನಾದ ಆ ಕಿಶೋರ ಕೃಷ್ಣನು ಅಂಬೆಗಾಲಿನಿಂದ ಮನೆಯ ಅಂಗಳದಲ್ಲಿ ರತ್ನಮಯವಾದ ಕಂಬಗಳ ಮಧ್ಯದಲ್ಲಿ ಸಂಚರಿಸುತ್ತಿರಲು ಅವನ ಮನೋಹರ ಮೂರ್ತಿಯು ಕಂಬಗಳಲ್ಲಿ ಪ್ರತಿಬಿಂಬಿಸಲು ಅದನ್ನು ಸಾಕ್ಷಾತ್ ಕೃಷ್ಣನೋ ಎಂದು ತಿಳಿದು ತಾಯಿ ತನ್ನ ಕೈಯ್ಯಲ್ಲಿದ್ದ ಬೆಣ್ಣೆಯ ಮುದ್ದೆಯನ್ನು ಎರಡು ಭಾಗವನ್ನಾಗಿ ಮಾಡಿದಳಂತೆ. ಅದನ್ನೆ ಲೀಲಾಶುಕ;

ನೃತ್ಯಂತಮತ್ಯಂತವಿಲೋಕನೀಯಂ
ಕೃಷ್ಣಂ ಮಣಿಸ್ತಂಭಗತಂ ಮೃಗಾಕ್ಷೀ
ನಿರೀಕ್ಷ್ಯ ಸಾಕ್ಷಾದಿವ ಕೃಷ್ಣಮಗ್ರೇ
ದ್ವಿಧಾ ವಿತೇನೇ ನವನೀತಮೇಕಂ"

ಎಂಬುದಾಗಿ ವರ್ಣಿಸಿದ್ದಾನೆ.

ಶ್ರೀ ಕೃಷ್ಣನ ಬಾಲಲೀಲೆಗಳು ಭಾಗವತದ ದಶಮಸ್ಕಂಧದಲ್ಲೂ ವಿಷ್ಣುಪುರಾಣ ಹಾಗೂ ಹರಿವಂಶಗಳಲ್ಲಿ ವರ್ಣಿತವಾಗಿದ್ದರೂ, ಲೀಲಾಶುಕನ ಕೃಷ್ಣ ಕರ್ಣಾಮೃತಕ್ಕೆ ಸಮತೂಗಲಾರದು ಎಂದು ಹಲವರ ಅಭಿಪ್ರಾಯಪಡುತ್ತಾರೆ. ಅನಾದಿಯಾದ ವೇದಗಳಿಗೂ ಸಿಲುಕದ ಪುಣ್ಯವಿಶೇಷದಿಂದ ಮುನಿಗಳಿಗೆ ಮನೋಗಮ್ಯನಾದರೂ, ಅನತಿ ದೂರದಲ್ಲಿರುವ ಆ ಹರಿಯು ಗೋಪಗೋಪಿಯರ ಮಧ್ಯೆ ತಾನೂ ಓರ್ವ ಬಾಲಕನಂತೆ ಆಡಿ ಪಾಡಿ ನಲಿದು ಬೃಂದಾವನದ ಜನರಿಗೆಲ್ಲ ಆನಂದವನ್ನಿತ್ತ ಆ ಕೃಷ್ಣನ ಲೀಲಾರಸಗಳನ್ನು ಎಷ್ಟು ವರ್ಣಿಸಿದರೂ ಕವಿಗೆ ತೃಪ್ತಿಯಾಗಲಾರದು. ತಾಯಿ ಯಾವ ನಿಷ್ಕಾಮತೆಯ ಭಾವದಿಂದ ತನ್ನ ಕಂದಮ್ಮನನ್ನು ಲಾಲಿಸುವಳೋ ಆ ಕಂದನ ಆಟ ಪಾಟಗಳನ್ನು ನೋಡಿ ನಲಿಯುವಳೋ ಅಂತಹ ಭಾವಭಕ್ತಿಗೆ "ವಾತ್ಸಲ್ಯ ಭಾವ"ವೆಂದು ಹೆಸರು. ಪುರುಷೋತ್ತಮನು ಲೋಕ ಕಲ್ಯಾಣಕ್ಕೋಸ್ಕರ ಹಲವು ಅವತಾರಗಳನ್ನು ಎತ್ತಿರುವುದು ಕವಿಯ ದೃಷ್ಟಿಯಲ್ಲಿ ಅಲ್ಪವೇ, ತಾನು ಸಕಲ ಕಲ್ಯಾಣ ಗುಣ ಪರಿಪೂರ್ಣನಾಗಿ ಆಶ್ರಯಿಸುವ ಚೇತನರಿಗೆ ಅವ್ಯಕ್ತನಾದರೂ, ಅವರಲ್ಲಿ ನಿರ್ಹೇತುಕವಾದ ಕೃಪೆಯಿಂದ ದ್ವಾಪರಯುಗದಲ್ಲಿ ಮಾತ್ರ ಆ ಪರಮಾತ್ಮ ಜನಸಾಮಾನ್ಯರ ಮಧ್ಯೆ ತಾನೂ ಓರ್ವ ಬಾಲಕನಂತೆ ಬೆಳೆದು ತನ್ನ ಸಾಮಿಪ್ಯ ಸೌಲಭ್ಯಗಳನ್ನಿತ್ತ ಎಂಬುದಾಗಿ ಕವಿ ಶ್ರೀಕೃಷ್ಣನ ಅವತಾರಕ್ಕೆ ಹೆಚ್ಚು ಪ್ರಶಸ್ತಿ ಮನ್ನಣೆಗಳನ್ನು ಕೊಡುತ್ತಾ ಈ ರೀತಿ ಹೇಳಿದ್ದಾನೆ–

ಅವತಾರಾಃ ಸಂತ್ವನ್ಯೇ
ಸರಸಿಜ ನಯನಸ್ಯ ಸರ್ವತೋ ಭದ್ರಾಃ
ಕೃಷ್ಣಾ ದನ್ಯಃ ಕೋ ವಾ
ಪ್ರಭವತಿ ಗೋ ಗೋಪ ಗೋಪಿಕಾ ಮುಕ್ತ್ಯೈ

ಎಲ್ಲಾ ರೀತಿಗಳಿಂದಲೂ ಮಂಗಳಕರಗಳಾದ ಪರಮಾತ್ಮನ ಅವತಾರಗಳು ಹಾಗಿರಲಿ; ಕೃಷ್ಣನ ಹೊರತಾಗಿ ಬೇರೆ ಯಾರುತಾನೆ ಗೋ ಗೋಪ ಗೋಪಿಯರ ಮುಕ್ತಿಗೋಸ್ಕರ ಅವತಾರ ಮಾಡಿದರು.

"ಕೃಷ್ಣಾತ್ ಪರಮ್ ಅಹಂ ಕಿಮಪಿ ತತ್ತ್ವಂ ನ ಜಾನೆ" ಎಂಬುವ ಲೀಲಾಶುಕ ಹಠವಾದಿ ಎಂಬಂತೆ ಈ ಕೆಳಗಿನ ಶ್ಲೋಕದಿಂದ ವ್ಯಕ್ತವಾಗುತ್ತೆ. ಅಯೋಧ್ಯೆಯಲ್ಲಿ ರಾಮನನ್ನು ಕಂಡ ಕವಿ–

ವಿಹಾಯ ಕೋದಂಡ ಶರೌ ಮುಹೂರ್ತಂ
ಗೃಹಾಣ ಪಾಣೌ ಮಣಿ ಚಾರು ವೇಣುಮ್
ಮಯೂರ ಬರ್ಹಂ ಚ ನಿಜೋತ್ತಮಾಂಗೇ
ಸೀತಾಪತೇ ತ್ವಾಂ ಪ್ರಣಮಾಮಿ ಪಶ್ಚಾತ್

ಎಲೈ ಸೀತಾಪತಿ; ನಿನ್ನ ಕೈಯ್ಯಲ್ಲಿರುವ ಕೋದಂಡ ಶರಗಳನ್ನು ಕ್ಷಣಕಾಲ ಬಿಟ್ಟು, ಕೈಯ್ಯಲ್ಲಿ ಮನೋಹರವಾದ ಮಣಿಮಯ ಭೂಷಣವಾದ ಮುರಳಿಯನ್ನು ಹಿಡಿದು ತಲೆಯಲ್ಲಿ ನವಿಲುಗರಿಯನ್ನು ಧರಿಸಿ ನಿಂತರೆ ಮಾತ್ರ ನಿನಗೆ ನಾನು

( 35ನೇ ಪುಟ ನೋಡಿ )

# ಕೃಷ್ಣದೇವರ ಅಷ್ಟಕ



ಇಂದು ನಾನೇನು ಸುಕೃತವ ಮಾಡಿದೆನೊ
ಮಂಗಳ ಮಹಿಮ ವೆಂಕಟ ಬಂದ ಮನೆಗೆ ॥ ಪಲ್ಲ ॥

ನೊಸಲು ಸೂಡಿದ ಪಟ್ಟಿಯೆಸಳು ಕಸ್ತೂರಿಯು
ಹಸನಾದ ಸಣ್ಣನಾಮದ ಸ್ವಾದು ತಿಲಕ
ಕುಸುಮ ಮಲ್ಲಿಗೆ ಜಾಜಿ ಎಸಳು ಸಂಪಿಗೆಯ
ವಸುಧೀಶ ಸೊಬಗವೆಂಕಟ ಬಂದ ಮನೆಗೆ ॥೧॥

ಹಾರ ಕೇಯೂರ ಕಂಠದಿ ರತ್ನದ ಹಾರ
ಹಾರದ ನಡುವೆ ಹಾಕಿದವೇಳು ಪದಕ
ತೋರ ಮುತ್ತಿನ ಕಂಠಮಾಲೆ ಹೇರಳವು
ವಾರಿಧೀಶ ಎನ್ನ ವೆಂಕಟ ಬಂದ ಮನೆಗೆ ॥೨॥

ಹೊಳೆವ ಪೀತಾಂಬರ ಉಡಿಯ ಕಠಾರಿ
ಹೊಳೆವ ಕಂಗಳ ನೋಟ ಹೊಸ ಪಂಚಬಾಣ
ವೀಳ್ಯದ ಬಾಯಿ ಕರ್ಪುರದ ಕರಡಿಗೆ
ಚೆಲುವ ಚೆಳ್ಳಿಗರ ವೆಂಕಟ ಬಂದ ಮನೆಗೆ ॥೩॥

ಪಿಡಿದನು ಧರಿಸ್ಯಾನು ಎಡಗಯ್ಯ ಶಂಖ
ಪಿಡಿದ ಖಡ್ಗವು ಧರೆ ಜಟ್ಟರ ( ? ) ಮರ್ದಿಸುತ
(ಬಿಡದೆ) ನಂಬಿದ ಭಕ್ತರ ಸಲಹುವ ದೇವ
ಬಡವರಾಧಾರಿ ವೆಂಕಟ ಬಂದ ಮನೆಗೆ ॥೪॥

ಬಾಲಚಂದ್ರನ ಪೋಲ್ವ ಲೋಲ ಕುಂಡಲವು
ನೀಲ ಮಾಣಿಕವು ವಜ್ರದ ಮುಕುಟ
ಕಾಲಪೆಂಡೆಯವು ರತ್ನದಾವುಗೆಯು
ಮೇಲುಗಿರಿವಾಸ ವೆಂಕಟ ಬಂದ ಮನೆಗೆ ॥೫॥

ಬಿಗಿದು ಸುತ್ತಿದವಲ್ಲಿ ಬಿಡುಮುತ್ತ ಹರಳಿ
ನುಂಗುರಗಳು ಚೆಲ್ವ ಹಸ್ತದಲಿ
ಅಗಣಿತ ಹಸ್ತಕಂಕಣವು ಹೊಳವುತಲಿ
ಜಗದೊಳತ್ಯಧಿಕ ವೆಂಕಟ ಬಂದ ಮನೆಗೆ ॥೬॥

ಪಾಷಾಣ ರೂಪಿನಹಲ್ಯಾ ಶಾಪವನು
(ನಿಶ್ಶಾಪ)† ಮಾಡಿದ ಸೊಬಗು ರೂಪಿನಲಿ
ಶೇಷಾಚಲಾಧೀಶವಾಸ ಈಶ ಎನ್ನ
ಭಾಷೆ ಪಾಲಿಪ ವೆಂಕಟ ಬಂದ ಮನೆಗೆ ॥೭॥

ಇಂದಿರೆ ರಮಣನೆ ಎನ್ನ ಕುಲತಿಲಕ
ನಂದನ ಕಂದ ಗೋವಿಂದ ಮುಕುಂದ
ಬಂದೆನ್ನ ಪಾಪ ಬಂಧನವ ಪರಿಹೀಸೊ
ಕಂದರ್ಪ ಜನಕ ವೆಂಕಟ ಬಂದ ಮನೆಗೆ ॥೮॥

---

†. [illegible] ಪೋಶಣೆ.

ಕೃಷ್ಣದೇವರ ಅಷ್ಟಕದ ವಸ್ತು ಮೇಲುಗಿರಿವಾಸ ವೆಂಕಟೇಶನ ಸ್ತುತಿ. ಕೃತಿಯಲ್ಲಿ ಪಲ್ಲವಿ ಹಾಗೂ 8 ವೃತ್ತಗಳಿವೆ. ಪ್ರತಿ ವೃತ್ತವೂ 'ವೆಂಕಟ ಬಂದ ಕಾಣೆ' ಎಂಬ ನುಡಿಗಟ್ಟಿನೊಡನೆ ಮುಗಿಯುತ್ತದೆ. ವೆಂಕಟೇಶ್ವರ ಧರಿಸಿದ್ದ ಹಲವಾರು ಆಭರಣಗಳ ಉಲ್ಲೇಖ ಕೃತಿಯಲ್ಲಿದೆ. ಕೃತಿಕಾರ ಯಾರೆಂಬುದು ತಿಳಿಯಬಂದಿಲ್ಲ.

ಪ್ರಸ್ತುತ ಕೃತಿಯನ್ನು 'ವಚನ ವಾಙ್ಮಯ ಭಂಡಾರ' ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಲ್ಲಿನ ಕಾಗದದ ಕ್ರಮಾಂಕ 3501 ನ್ನು ಆಧರಿಸಿ ಸಿದ್ಧಪಡಿಸಲಾಗಿದೆ. ಕೃತಿಯನ್ನು ಉಪಯೋಗಿಸಿಕೊಳ್ಳಲು ಅನುಮತಿ ಇತ್ತ ಅಧಿಕಾರಿಗಳಿಗೆ ನನ್ನ ವಂದನೆಗಳು.

ಶ್ರೀ ಎಸ್. ಶಿವಣ್ಣ



# ತೀರ್ಥಕ್ಷೇತ್ರ ದರ್ಶನ



ಶ್ರೀ ಹುಲಿಕಂಟೆರಾಯಸ್ವಾಮಿ

## ಹುಲಿಕುಂಟೆರಾಯ ಕ್ಷೇತ್ರ

ಶ್ರೀ ಎಸ್. ಬಿ. ಜಯರಾವ್

ಭರತ ಚಕ್ರವರ್ತಿ ಆಳಿದ ಈ ಭರತ ಖಂಡ ಅನೇಕ ಪುಣ್ಯಕ್ಷೇತ್ರಗಳ, ಯೋಗಿಗಳ, ಸಾಧು ಸಂತರ ತಪೋಭೂಮಿಯಾಗಿದೆ. ತಪಸ್ವಿಗಳ ಯೋಗಸಾಧನೆಯಿಂದ ಈ ಭಾರತ ಭೂಮಿ ಅದರಲ್ಲೂ ಕನ್ನಡಿಗರ ಕನ್ನಡನಾಡು ಪುಣ್ಯ ಪಾವನ ನಾಡಾಗಿದೆ. ಈ ನಾಡು ತಪಸ್ವಿಗಳ ನೆಲೆವೀಡಾದಂತೆ ಪ್ರಕೃತಿಯ ಸೊಬಗಿಗೂ ಹೆಸರಾಗಿದೆ.

ಐತಿಹಾಸಿಕ ಹಿನ್ನೆಲೆಯುಳ್ಳ ಜಗತ್ಪ್ರಸಿದ್ಧ ವಿಜಯನಗರದ ಸ್ಕಂದ ಪರ್ವತದ ದಕ್ಷಿಣದ ದಿಕ್ಕಿನಲ್ಲಿ ಪ್ರಾಣದೇವರ ಕ್ಷೇತ್ರವಾದ ಈ ಬೊಮ್ಮಗಟ್ಟವು ಪ್ರಕಾಶಮಾನವಾಗಿ ಕಂಗೊಳಿಸುತ್ತಿದೆ.

ನಿಸರ್ಗ ಸೌಂದರ್ಯದಿಂದ ರಮಣೀಯವಾದ ಈ ತಾಣವು ಉತ್ತರದಲ್ಲಿ ಕುಮಾರಸ್ವಾಮಿಯ ಪರ್ವತ ಶ್ರೇಣಿಯಿಂದಲೂ, ಪೂರ್ವ ಹಾಗೂ ದಕ್ಷಿಣದಲ್ಲಿ ಹೊಳೆಯುವ ಜಲಪೂರ್ಣ ತಟಾಕಗಳಿಂದಲೂ, ಪಶ್ಚಿಮ ದಿಕ್ಕಿಗೆ ದುರ್ಗಾದೇವಿಯ ಮಂದಿರದಿಂದಲೂ ಶೋಭಿತವಾಗಿದೆ ಪ್ರಕೃತಿಯ ಸಿರಿಯೇ ಇಲ್ಲಿ ಜನ್ಮ ತಾಳಿರುವುದೋ ಎಂಬಂತೆ ತೆಂಗು, ಮಾವು, ಬಾಳೆ, ಮಲ್ಲಿಗೆ, ಸಂಪಿಗೆ, ಮಂದಾರ, ಜಾಜಿ ಇತ್ಯಾದಿ ತರುವೃಕ್ಷ ಲತಾವೃತವಾಗಿ ಈ ಪ್ರದೇಶವು ನಯನ ಮನೋಹರವಾಗಿದೆ.

ಆಧುನಿಕತೆಯ ಬೆಡಗಿನಲ್ಲಿ ಮಿಂದು, ನೊಂದ ಭಕ್ತರಿಗೆ ಈ ದಿವ್ಯ ಕ್ಷೇತ್ರದ ದರ್ಶನ ಮಾತ್ರದಿಂದಲೇ ಹೃದಯ ಮಾಲಿನ್ಯವು ತೊಲಗಿ ಏನೋ ಒಂದು ವಿಧದ ನಿರ್ವಚನೀಯ ಆನಂದ, ಸಂತೋಷ ಉಂಟಾಗುತ್ತದೆ.

ಇಲ್ಲಿನ ಏಕಾಂತ ಪ್ರದೇಶ, ಭವ್ಯವಾದ ಗುಡಿ ಗುಂಡಾರಗಳು, ಇದರ ಸಮೀಪದಲ್ಲಿಯೇ ಮಿಂದು ಮಡಿಯಾಗಲು ಸಿಹಿ ನೀರಿನ ಪುಷ್ಕರಿಣಿ, ದೇಹ ಶುಚಿಮಾಡೊಡನೆ, ಮನಸ್ಸನ್ನು ಶುಭ್ರಗೊಳಿಸಲು ತೀರ್ಥಕ್ಕೆ ಅಂಟಿಕೊಂಡಂತೆ ಶ್ರೀ ರುದ್ರದೇವರು, ಮುಂದೆ ನಡೆದರೆ ಈ ಭವ ಬಂಧನದಿಂದ ಪಾರುಗಾಣಿಸಲೋಸುಗ ಅಂಬಿಗನಂತೆ ನಿಂತಿರುವ ಶ್ರೀ ಅಶ್ವತ್ಥನಾರಾಯಣನಿಗೆ ನಮಿಸಿ ಮುಂದೆ ಸಾಗಿದರೆ ದೇವಾಲಯದ ಪೂರ್ವದ್ವಾರ ಕಂಗೊಳಿಸುತ್ತದೆ. ಭಕ್ತ ಸಮೂಹ ಸುಲಭವಾಗಿ ಪ್ರದಕ್ಷಿಣೆ ಹಾಕಲು ಅನುಕೂಲವಾಗಿರುವ ಭವ್ಯವಾದ ಪ್ರಾಕಾರದ ಪ್ರಾಂಗಣವಿದ್ದು, ಭಕ್ತಾಭೀಷ್ಟ ಪ್ರದನಾದ ಶ್ರೀ ಪ್ರಾಣದೇವರು ತನ್ನ ಸ್ವಾಮಿಯ ಸಹಿತ ನೆಲೆಸಿರುವ ಈ ದೇವಾಲಯ ಭಕ್ತರ ಚಂಚಲ ಮನಸ್ಸನ್ನು ಏಕಾಗ್ರತೆಯಿಂದ ದೈವಿಕ ಭಾವನೆಯ ಕಡೆಗೆ ಸೆಳೆದೊಯ್ಯುತ್ತದೆ.

ವೈಕುಂಠ ಬಿಟ್ಟು ಕಲಿಯುಗದ ಜನರನ್ನು ಉದ್ಧರಿಸಲೋಸುಗ ಶ್ರೀ ಲಕ್ಷ್ಮೀ ನಾರಾಯಣನು ಹೇಗೆ ಸ್ವಯಂ ತಾನೇ ಬಂದು ತಿರುಪತಿಯಲ್ಲಿ ವಿರಾಜಮಾನನಾಗಿ ನೆಲೆಸಿ ಸಕಲರನ್ನು ಪರಿಪಾಲಿಸುತ್ತಿರುವನೋ ಹಾಗೆಯೇ ಪ್ರಾಣದೇವರು ಸತ್ಯಲೋಕದಿಂದ ಈ ಭುವಿಗೆ ಆಗಮಿಸಿ ಹುಲಿಕುಂಟೆಯ ತಟಾಕದ ಹೂಲೀ ಪೊದೆಯೊಂದರಲ್ಲಿ ಗೂಢವಾಗಿ ನೆಲೆಸಿದ್ದ.

ಅನೇಕ ಶತಮಾನಗಳ ಹಿಂದೆ ಈ ತಟಾಕದ ಸಮೀಪದಲ್ಲಿ ಬೊಮ್ಮಯ್ಯನೆಂಬ ಗೋವಳಿಗನು ಇದ್ದ. ದಿನವೂ ದನಗಳನ್ನು ಗುಡ್ಡದ ಬಳಿಗೆ ಹೊಡೆದುಕೊಂಡು ಹೋಗಿ ಮೇಯಿಸಿಕೊಂಡು ಹುಲಿಕುಂಟೆ ತಟಾಕದಲ್ಲಿ ನೀರುಕುಡಿಸಿ ಕರೆತರುತ್ತಿದ್ದನು.

ಹೀಗಿರಲು ಒಂದಾನೊಂದು ದಿನ ತೇಜಃಪೂರ್ಣವಾದ ಒಂದು ಹೊಸ ಹಸು ಆದೇ ತಾನೇ ಜನಿಸಿದ ಕರುವಿನೊಂದಿಗೆ ಹೇಗೋ ಅಂತೂ ನುಸುಳಿಕೊಂಡು ಬಂದು ಈ ಹಿಂಡನ್ನು ಸೇರಿಕೊಂಡಿತು. ಹೊಸ ತೇಜಸ್ವಿ ಹಸುವಿನ ದಿವ್ಯಲಕ್ಷಣವನ್ನು ಕರುಳಿನ ಕಳೆಯನ್ನು ನೋಡಿ ಗೋವಳಿಗನು ತುಂಬಾ ಆನಂದ ತುಂದಿಲನಾದನು. ಆ ರಾತ್ರಿ ಉಳಿದ ಹಸುಗಳೊಂದಿಗೆ ಈ ಹಸುವನ್ನೂ

# ಮೊರೆ

ಶ್ರೀಪಾದವಲ್ಲಭನೆ ಸದ್ಗುರು ರಾಯಾ।
ತಾಪಹರನೆ ಬಿಡಿಸೆನ್ನ ಮಾಯಾ ॥ ಪಲ್ಲವಿ ॥

ಎಷ್ಟುಮಾಡಿದರು ಈ ದೇಹಭಾವವು ಎನ್ನ।
ಬಿಟ್ಟು ಬಿಡದಲೆ ತಾ ಕಾಡುತಲಿಹುದು ॥
ಕಷ್ಟವ ಕೊಡುತಿವೆ ಇಂದ್ರಿಯ ಗಣಗಳು।
ಮುಷ್ಟಿಯೋಳ್ ಕಪಿಯಂತೆ ಬಿಗಿದಿಟ್ಟುಕೊಂಡು ॥ ೧ ॥

ತನ್ನ ತಾನರಿಯದೆ ತೊಳಲುತಿದೆ ಜೀವ।
ತನ್ನಾತ್ಮ-ಬ್ರಹ್ಮಸ್ವರೂಪವ ಮರೆತು ॥
ಬನ್ನವ ಬಡುತಿದೆ ದುರಹಂಕಾರದಿ।
ಸನ್ನಿಧಿಯಲಿ ಬಂದೆ ಕೃಪೆದೋರು ದೊರೆಯೇ ॥ ೨ ॥

ಗುರು ನಿನ್ನ ಕೃಪೆಯ ಕಟಾಕ್ಷವು ಬೀಳದೆ।
ಸರಿಯಾದ ದಾರಿಯು ಕಾಣದೋ ದೇವಾ ॥
ಹರುಷದಿ ಬೋಧಾಮೃತವನು ಸವಿಸುತ।
ನಿರುತದಿ ಅರಿವಿನ ಬೆಳಕಲಿ ನಡೆಸೋ ॥ ೩ ॥

ಕೊಡು ಎಂದು ಬೇಡುವುದಿಲ್ಲ ಇನ್ನೇನನು।
ಬಿಡಿಸಿದರೆ ಸಾಕೆನ್ನ ವಾಸನೆಗಳನು ॥
ಮಡದಿ ಮಕ್ಕಳು ಮನೆ ಮೋಹವನಳಿಸಯ್ಯ।
ಅಡಿಯೊಳು ಮುಡಿಸುವೆ ಈ ಜೀವನನ್ನು ॥ ೪ ॥

ಭಕ್ತರುದ್ಧಾರಕನೆ ಜಯಜಯ ಗುರುನಾಥಾ।
ಮುಕ್ತಿದಾಯಕನೆ ಶ್ರೀಪಾದ ಅವಧೂತಾ ॥
ಯುಕ್ತ ಜ್ಞಾನವ ನೀಡಿ ನಿನ್ನೊಳು ಬೆರೆವಂಥ।
ಶಕ್ತಿಯನಿತ್ತು ಉದ್ಧರಿಸಯ್ಯ ತಂದೇ ॥ ೫ ॥

(ಕುರವಪುರ ಶ್ರೀಪಾದವಲ್ಲಭ ಮಂದಿರಕ್ಕೆಹೋದಾಗ ರಚಿಸಿದ್ದು)

— ಬಾಲಚಂದ್ರ ಫಾಣ್ಸೇಕರ.



ಹಿಂಡಿದಾಗ ಅದರ ಅಮೃತ ಸದೃಶವಾದ ಹೇರಳ ಹಾಲನ್ನು ಕಂಡು ಆಶ್ಚರ್ಯ ಚಕಿತನಾದನು. ಈ ಹಸುವಿನ ವಿಶೇಷತೆಯನ್ನು ಮನಗಂಡು ನೂರಾರು ಹಸುಗಳನ್ನು ಸಾಕುವ ಬದಲು ಇಂಥ ಒಂದೇ ಒಂದು ಹಸುವನ್ನು ಸಾಕಿದರೆ ಸಾರ್ಥಕವೆಂದು ಕೊಂಡನು.

ನಂತರದ ದಿನಗಳಲ್ಲಿ ಆ ಹಸು ಹಾಲು ಕೊಡಲಿಲ್ಲ. ಮೇಯುವಾಗ ಇವನ ಕಣ್ಣು ತಪ್ಪಿಸಿ ಎತ್ತಲೋ ಹೋಗುತ್ತಿತ್ತು. ಬೊಮ್ಮಯ್ಯ ಒಂದೊಮ್ಮೆ ಅದನ್ನು ಹಿಂಬಾಲಿಸಿ ನಡೆದು ಹಸು ಹೂಲಿ ಪೊದೆಯಲ್ಲಿ ಹಾಲುಕರೆಯುತ್ತಿದ್ದುದನ್ನು ನೋಡಿದಾಗ, ಹಸು ಮಾಯವಾಗಿ ಪೊದೆಯಿಂದ ಬೆಳಕು ಚಿಮ್ಮಿದ್ದನ್ನು ಕಂಡು ಮನೆಗೆ ಹಿಂದಿರುಗಿದಮೇಲೆ, ಆ ರಾತ್ರಿ ಪ್ರಾಣದೇವರು ಕನಸಿನಲ್ಲಿ ಬಂದು 'ತಾನು ಪೊದೆಯಲ್ಲಿರುವುದಾಗಿ ತಿಳಿಸಿ ಹೊರತೆಗೆದು ಪ್ರತಿಷ್ಠಾಪನೆ ಮಾಡಿ ಪೂಜಿಸುವಂತೆ' ತಿಳಿಸಿದಂತಾಗಲು, ಬೊಮ್ಮಯ್ಯ ಊರಿನವರೊಡನೆ ಸೇರಿ ಪೊದೆಯನ್ನಗೆಸಿ ಪ್ರಾಣದೇವರನ್ನು ಪ್ರತಿಷ್ಠೆ ಮಾಡಿಸಿದ. ಹುಲಿಕುಂಟೆರಾಯ ಎಂಬ ಹೆಸರಿನಿಂದ ಪ್ರಾಣದೇವರು ಪ್ರಸಿದ್ಧನಾದ.

ಹೀಗೆ ಕಾಲಚಕ್ರ ಉರುಳಿ ಅನೇಕ ಶತಮಾನಗಳು ಸಂದುಹೋದವು. ವಿಜಯನಗರ ಸಾಮ್ರಾಜ್ಯದ ಶ್ರೀ ಕೃಷ್ಣದೇವರಾಯನ ಆಸ್ಥಾನದಲ್ಲಿ ಧರ್ಮಗುರುಗಳಾದ ವ್ಯಾಸರಾಜರು ಪ್ರಾಣದೇವರ ಅಂತರಂಗ ಭಕ್ತರು. ಪ್ರತಿ ದಿನವೂ ಒಂದೊಂದು ಪ್ರಾಣದೇವರ ಪ್ರತೀಕವನ್ನು ಪ್ರತಿಷ್ಠಾಪಿಸಿ ಪೂಜಿಸಬೇಕೆಂಬ ಮಹದಾಸೆ ಉಳ್ಳವರು. ಅವರು ಸಂಚರಿಸಿದಲ್ಲೆಲ್ಲಾ ಈ ಪುಣ್ಯಕಾರ್ಯ ಅವ್ಯಾಹತವಾಗಿ ಸಾಗುತ್ತಲೇ ಇತ್ತು.

ಶ್ರೀಗಳು ಶಿಷ್ಯರ ಅನುಗ್ರಹಾರ್ಥವಾಗಿ ದೇಶ ಪರ್ಯಟನ ಮಾಡುತ್ತಾ ಕ್ರಿ. ಶ. 1500 ರಲ್ಲಿ ಬೊಮ್ಮಗಟ್ಟ ಕ್ಷೇತ್ರಕ್ಕೆ ಆಗಮಿಸಿದರು. ಆಗ ಅಲ್ಲಿ ಕರಣಿಕರಾಗಿದ್ದ ನರಸಿಂಗರಾಯರ ಮನೆಯಲ್ಲಿ ಸ್ವಾಮಿಗಳ

ಬಿಡಾರವಾಯಿತು. ಕರಣಿಕರು ಸ್ವಯಂ ಅಭಿವ್ಯಕ್ತನಾದ ಹುಲಿಕುಂಟೆರಾಯನ ವೃತ್ತಾಂತವನ್ನು ಗುರುಗಳಲ್ಲಿ ನಿವೇದಿಸಿಕೊಂಡರು.

ವ್ಯಾಸರಾಜರು ಬಹು ಸಂತೋಷಿತರಾಗಿ. ಜ್ಞಾನ ದೃಷ್ಟಿಯಿಂದ ಎಲ್ಲವನ್ನು ಅರಿತು, ಅಂದಿನ ತಮ್ಮ ಪೂಜೆ, ಭಿಕ್ಷಾದಿಗಳು ಪ್ರಾಣದೇವರ ಸನ್ನಿಧಿಯಲ್ಲಿ ನಡೆಯಬೇಕೆಂದು ಆಜ್ಞಾಪಿಸಿದರು.

ಅವತಾರತ್ರಯ ಪ್ರಾಣದೇವರ ಪ್ರತೀಕವನ್ನು ಕಂಡ ಶ್ರೀಗಳು ತುಂಬಾ ಹರ್ಷಗೊಂಡು ಸ್ವತಃ ತಾವೇ ಸ್ವಾಮಿಯ ಪೂಜಾ ಕೈಂಕರ್ಯಗಳನ್ನು ಮಾಡಿ ಇಲ್ಲಿನ ಪ್ರಾಣದೇವರು "ಸ್ವಯಂವ್ಯಕ್ತ" ಪ್ರತೀಕವಾದುದರಿಂದ ಮಹಾಜಾಗೃತ ಸ್ಥಳ ಹಾಗೂ ಪುಣ್ಯಸ್ಥಳವೆಂತಲೂ ಭಕ್ತರಿಗೆ ತಿಳಿಸಿ ಮುಂದಕ್ಕೆ ದಿಗ್ವಿಜಯ ಮಾಡಿದರು.

ಈ ಗ್ರಾಮದಲ್ಲಿ ಸ್ವಾಮಿಯ ಅನುಗ್ರಹದಿಂದ ಶೆಟ್ಟಿ ಬಣಜಿಗ ದಂಪತಿಗಳಿಗೆ ಜನಿಸಿದ ಮುದಿ ಹೂಲೆಪ್ಪನು ಚಿಕ್ಕಂದಿನಿಂದಲೂ ಸ್ವಾಮಿಯ ಅಂತರಂಗ ಭಕ್ತನಾಗಿದ್ದನು. ಈ ಭಕ್ತನೊಂದಿಗೆ ಸ್ವಾಮಿಯು ಮಾತನಾಡುತ್ತಿದ್ದನು. ಈತನ ಸಂತತಿಯವರೇ ಈಗಲೂ ಸ್ವಾಮಿಯ ಅರ್ಚಕರಾಗಿದ್ದು ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಈ ಮುದಿ ಹೂಲೆಪ್ಪನ ಕಾಲದಲ್ಲಿ ಭಕ್ತಾದಿಗಳಿಂದ ಸಂಗ್ರಹವಾಗಿದ್ದ ಅಲ್ಪ ಹಣದಿಂದ ದೇವಸ್ಥಾನದ ನಿರ್ಮಾಣ ಕಾರ್ಯ ಆರಂಭವಾಯಿತು. ಆಗ ಸ್ವಪ್ನದಲ್ಲಿ ಪೂರ್ವಕ್ಕೆ ಒಂದು ಪುಷ್ಕರಿಣಿಯನ್ನು ನಿರ್ಮಿಸುವಂತೆಯೂ, ಆದರಲ್ಲಿ ಅಪಾರ ಧನ ಸಂಗ್ರಹ ಸಿಗುವುದೆಂದೂ, ಸ್ವಾಮಿ ಸೂಚನೆ ಇತ್ತನು. ಸ್ವಾಮಿಯ ಅಪ್ಪಣೆಯಂತೆ ಹುಲಿಕುಂಟೆ ತೀರ್ಥ ನಿರ್ಮಾಣವಾಯಿತು. ಈ ಪುಷ್ಕರಿಣಿ ನಿರ್ಮಾಣದಲ್ಲಿ ಸಿಕ್ಕ ಹಣದಿಂದ ದೇವಸ್ಥಾನದ ನಿರ್ಮಾಣ ಕಾರ್ಯ ಪೂರ್ಣಗೊಂಡಿತು.

ಈ ಪುಣ್ಯಸ್ಥಳವು ಸಾಧಕರ ತಪೋಭೂಮಿ. ರಸಿಕರ ಮನೋಲ್ಲಾಸದ ಪ್ರದೇಶವಾಗಿದೆ. ಎಂಥ ನಾಸ್ತಿಕರನ್ನೇ ಆಗಲಿ, ಆಸ್ತಿಕರನ್ನಾಗಿಸುವ ಪ್ರಯೋಗ ಶಾಲೆಯಾಗಿದೆ. ಕಲ್ಮಷಾವೃತವಾದ ಈ ಕಲಿಪುರುಷನಿಂದ ಬಿಡುಗಡೆ ಹೊಂದಿ ಪರಮಾತ್ಮನ ಪಾದಾರವಿಂದವನ್ನು ಸೇರಬೇಕಾದರೆ ಬೊಮ್ಮಗಟ್ಟೆಯಲ್ಲಿ ರಾರಾಜಿಸುತ್ತಿರುವ ಹುಲಿಕುಂಟೆ ಪ್ರಾಣದೇವರನ್ನು ಶರಣುಹೋಗದೆ ಬೇರೆ ಗತಿಯೇ ಇಲ್ಲ.

ಈ ಪುಣ್ಯಕ್ಷೇತ್ರಕ್ಕೆ ಅನೇಕ ಯತಿವರೇಣ್ಯರು ಹಾಗೂ ರಾಜಕಾರಣಿಗಳು ಭೇಟಿಯಿತ್ತು ತಮ್ಮ ಕೈಲಾದ ಸೇವೆಯನ್ನು ಕೈಕೊಂಡ ಅನೇಕ ದೃಷ್ಟಾಂತಗಳಿವೆ. ಅದರಂತೆ ಟಿಪ್ಪುಸುಲ್ತಾನ್, ಹಾಗೂ ಕೃಷ್ಣರಾಜ ಒಡೆಯರ ಕಾಲದಲ್ಲಿ ಹೆಸರು ಪಡೆದ ದಿವಾನ್ ಪೂರ್ಣಯ್ಯನವರು, ಈ ಗ್ರಾಮಕ್ಕೆ ಭೇಟಿ ಇತ್ತಾಗ್ಗೆ ದೇವಸ್ಥಾನದ ಮೇಲ್ಭಾಗದಲ್ಲಿ ಈಗ ಕಂಗೊಳಿಸುತ್ತಿರುವ ದಶಾವತಾರದ ವಿಗ್ರಹಗಳ ನಿರ್ಮಾಣ ಹಾಗೂ ಪ್ರಾಕಾರವನ್ನು ನಿರ್ಮಿಸಿದರೆಂದು ತಿಳಿಯಬರುತ್ತೆ.

ಶ್ರೀ ವಾದಿರಾಜತೀರ್ಥರು ಗ್ರಾಮಕ್ಕೆ ದಯಮಾಡಿಸಿದ್ದಾಗ್ಗೆ ಪುಷ್ಕರಿಣಿ ಅಗೆಯುವ ಕಾರ್ಯ ನಡೆಯುತ್ತಿದ್ದು ಅದರಲ್ಲಿ ದೊರೆತ ಶ್ರೀ ರುದ್ರದೇವರ ಪ್ರತಿಷ್ಠಾಪನವು ಅವರ ಅಮೃತ ಹಸ್ತದಿಂದ ನೆರವೇರಿತೆಂದು ಪ್ರತೀತಿಯಿದೆ, ಹಾಗೂ ಸ್ವಾಮಿಯ ಅವತಾರತ್ರಯ ವರ್ಣನಾತ್ಮಕ ಸ್ವಸ್ತಿಯನ್ನು ಅವರ ರಚಿಸಿ ಪ್ರಾಣದೇವರಿಗೆ ಸಮರ್ಪಿಸಿದರೆಂದು ವಾಡಿಕೆ ಮಾತು ಇದೆ.

ಕ್ರಿ. ಶ. 1807 ನೇ ಪ್ರಭವ ಸಂವತ್ಸರದ ಚಾತುರ್ಮಾಸದ ಪೂಜೆಗೆ ರಾಘವೇಂದ್ರ ಗುರುಸಾರ್ವಭೌಮರ ಪರಂಪರೆಯ ಸುಬುಧೇಂದ್ರ ತೀರ್ಥರು ಈ ದಿವ್ಯಕ್ಷೇತ್ರದಲ್ಲಿಯೇ ತಮ್ಮ ಚಾತುರ್ಮಾಸ ಕೈಕೊಂಡರೆಂದು ಗೊತ್ತಾಗುತ್ತೆ.

ಸುಜನೇಂದ್ರ ತೀರ್ಥರ ಆಶ್ರಮ ಸ್ವೀಕಾರವು ಸಹ ಇದೇ ಪುಣ್ಯಕ್ಷೇತ್ರದಲ್ಲಿ ನಡೆಯಿತೆಂತಲೂ ತಿಳಿಯುತ್ತೆ. ಹುಲಿಕುಂಟೆರಾಯನ ದೇವಸ್ಥಾನದ ಆವರಣದಲ್ಲಿಯೇ ಕಂಗೊಳಿಸುತ್ತಿರುವ ಶ್ರೀರಾಮ, ಸೀತಾಲಕ್ಷ್ಮಣರ ವಿಗ್ರಹ ಪ್ರತಿಷ್ಠಾಪನವು ಸುಜನೇಂದ್ರ ತೀರ್ಥರಿಂದ ನಡೆಯಿತೆಂದು ಗೊತ್ತಾಗುತ್ತೆ. ಈ ಪುಣ್ಯಕ್ಷೇತ್ರಕ್ಕೆ ಶ್ರೀ ರಾಯರ ಮಠ, ಶ್ರೀ ವ್ಯಾಸರಾಯ ಸ್ವಾಮಿಗಳ ಮಠ, ಶ್ರೀ ಸುಬ್ರಹ್ಮಣ್ಯ ಮಠ, ಶ್ರೀ ವಾದಿರಾಜ ಮಠ, ಶ್ರೀ ಕುಂದಾಪುರದ ವ್ಯಾಸರಾಜ ಮಠ, ಅಕ್ಷೋಭ್ಯತೀರ್ಥ ಮಠ ಮುಂತಾದ ಯತಿಗಳು ಆಗಮಿಸಿ ಹುಲಿಕುಂಟೆರಾಯನನ್ನು ಪೂಜಿಸಿರುತ್ತಾರೆ.

ಅನೇಕ ಭಕ್ತವರ್ಯರು ಈ ಕ್ಷೇತ್ರಕ್ಕೆ ಆಗಮಿಸಿ ಹುಲಿಕುಂಟೆರಾಯನ ಸೇವೆ



ಶ್ರೀ ಹುಲಿಕುಂಟೆರಾಯಸ್ವಾಮಿ ಪುಷ್ಕರಿಣಿ

# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586-00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**
**ತಿ. ತಿ. ದೇ.**

ಯನ್ನು ಕೈಕೊಂಡು ಕೃತಕೃತ್ಯರಾಗಿದ್ದಾರೆ. ಹುಲಿ ಕುಂಟೆರಾಯನ ಮೊರೆಹೊಕ್ಕವರು ತಮ್ಮ ಇಷ್ಟಾರ್ಥವನ್ನು ಪಡೆಯುವಲ್ಲಿ ಎಳ್ಳಷ್ಟು ಸಂಶಯವಿಲ್ಲ.

ಈ ಕ್ಷೇತ್ರದ ವಿಶಿಷ್ಟತೆಯಲ್ಲಿ ಮುಖ್ಯವಾದದ್ದು "ಹೂಲೆಪ್ಪನ ಜಾತ್ರೆ". ಪ್ರಸಿದ್ಧವಾದ ಈ ಜಾತ್ರೆಯಲ್ಲಿ ಬ್ರಹ್ಮ ರಥೋತ್ಸವ ಕಾಲಕ್ಕೆ ಸರಿಯಾಗಿ, ಹರಿಜನ ಭಕ್ತನೊಬ್ಬನಿಂದ ಚರ್ಮದ ಪಾದುಕೆ ಅರ್ಪಿಸುವ ಸೇವೆ ಇಂದಿಗೂ ನಡೆಯುತ್ತಲಿರುವುದು ಒಂದು ವಿಶೇಷ.

ಈ ಸ್ವಾಮಿಯು ಯಾವ ಜಾತೀಯ ವಿವಾದಕ್ಕೂ ಸಿಗದೆ ಎಲ್ಲಾ ಜಾತಿಯವರೂ, ಎಲ್ಲಾ ಮತಪಂಥದವರೂ ಸೌಹಾರ್ದತೆಯಿಂದ ಸ್ವಾಮಿಯ ಸೇವೆಯಲ್ಲಿ ನಿರತರಾಗಿರುವುದೂ ನಿಜವಾದ ಜಾತ್ಯಾತೀತತೆಯೂ ಇಲ್ಲಿ ಕಾಣಬರುತ್ತವೆ.

ಈ ಕ್ಷೇತ್ರವು ಈ ಮುಂಚೆ ಮದರಾಸ್ ಆಧಿಪತ್ಯದ ಬಳ್ಳಾರಿ ಜಿಲ್ಲೆಗೆ ಸೇರಿದ್ದು, ಈಚೆಗೆ ರಾಜ್ಯ ಪುನರ್ವಿಂಗಡಣೆಯಾದ ನಂತರ ಕರ್ನಾಟಕಕ್ಕೆ ಸೇರಿಕೊಂಡ ಬಳ್ಳಾರಿ ಜಿಲ್ಲೆಯ ಸೊಂಡೂರು ತಾಲ್ಲೂಕಿನಲ್ಲಿದೆ. ಈ ಕ್ಷೇತ್ರಕ್ಕೆ ಕೂಡ್ಲಿಗೆಯಿಂದ ಚೋರನೂರು ಮಾರ್ಗವಾಗಿ ಬರಲು ಬಸ್ ಸೌಕರ್ಯವಿದೆ. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಇಲಾಖೆಯವರು ಈ ಕ್ಷೇತ್ರಕ್ಕೆ ದಿನಂ ಪ್ರತಿ ಬಸ್ ಓಡಿಸುತ್ತಾರೆ.

ಹುಲಿ ಕುಂಟೆರಾಯಸ್ವಾಮಿಯ ಬ್ರಹ್ಮ ರಥೋತ್ಸವವು ಫಾಲ್ಗುಣ ಶುದ್ಧ ದಶಮಿ ದಿವಸ ನಡೆಯುತ್ತೆ. ರಥೋತ್ಸವ ಕಾಲಕ್ಕೆ ಬಂದ ಭಕ್ತಾದಿಗಳ ವಸತಿಗಾಗಿ ಭಕ್ತಾದಿಗಳಿಂದ ಕಟ್ಟಿಸಲ್ಪಟ್ಟ ಮಂಟಪಗಳ ಸೌಕರ್ಯಗಳಿರುತ್ತೆ. ಪ್ರತಿಯೊಬ್ಬ ಆಸ್ತಿಕ ಮಹಾಶಯನು ಈ ಪುಣ್ಯಕ್ಷೇತ್ರಕ್ಕೆ ಭೇಟಿ ಕೊಟ್ಟು ತಮ್ಮ ಜೀವನ ಸಾರ್ಥಕ ಪಡಿಸಿಕೊಳ್ಳಬಹುದು. ಹುಲಿಕುಂಟೆರಾಯನ ಭಕ್ತಾದಿಗಳು ಕರ್ನಾಟಕದಲ್ಲೇ ಅಲ್ಲದೆ ಭಾರತದ ಎಲ್ಲೆಡೆಯೂ ನೆಲೆಸಿರುತ್ತಾರೆ.

# ಉಡುಪಿ

**ಡಾ॥ ಎನ್. ಅನಂತರಂಗಾಚಾರ್**

ಕರ್ನಾಟಕ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಂಗಳೂರಿಗೆ ಉತ್ತರಕ್ಕಿರುವ ಪಟ್ಟಣ ಉಡುಪಿ. ಇದೇ ಹೆಸರಿನ ತಾಲೂಕಿನ ಮುಖ್ಯಸ್ಥಳ. ಹಿಂದೂಗಳ ಪವಿತ್ರ ಸ್ಥಳ, ಶೈಕ್ಷಣಿಕ ಕೇಂದ್ರ. ಇಲ್ಲಿ ಶ್ರೀ ಮಧ್ವಾಚಾರ್ಯರು ಸ್ಥಾಪಿಸಿದ ಸುಪ್ರಸಿದ್ಧ ಕೃಷ್ಣದೇವಾಲಯ ಇದೆ. ಇಲ್ಲಿ ವಾಸ್ತುಕಳಾಸೃಷ್ಟಿಯಿಂದ ಪ್ರಸಿದ್ಧವಾಗಿರುವ ಅನಂತೇಶ್ವರ ಮತ್ತು ಚಂದ್ರಮೌಳೀಶ್ವರ ದೇವಾಲಯಗಳೂ ಇವೆ. ಮಧ್ವಾಚಾರ್ಯರು ಸ್ಥಾಪಿಸಿದ ಅಷ್ಟ ಮಠಗಳೂ, ಮಧ್ವಮತದ ಇತರ ಮಠಗಳ ಶಾಖೆಗಳೂ, ಕನಕನ ಕಿಂಡಿ, ಕನಕನ ಗುಡಿ ಮತ್ತು ವಿಗ್ರಹ, ಪದ್ಮಸರೋವರವೆಂಬ ಕೊಳ ಇವೆಲ್ಲ ಇವೆ.

ಇಲ್ಲಿ ನಡೆಯುವ ಲಕ್ಷದೀಪೋತ್ಸವ, ಮಕರ ಸಂಕ್ರಮಣೋತ್ಸವ. ಶ್ರೀ ಕೃಷ್ಣ ಜಯಂತ್ಯೋತ್ಸವ, ೨ ವರ್ಷಕ್ಕೊಮ್ಮೆ ನಡೆಯುವ ಪರ್ಯಾಯೋತ್ಸವ – ಇವುಗಳಿಗೆ ಹಿಂದುಗಳು ಹೆಚ್ಚು ಸಂಖ್ಯೆಯಲ್ಲಿ ಇಲ್ಲಿಗೆ ಬರುತ್ತಾರೆ.

ಪ್ರೌಢಶಾಲೆಗಳೂ ಕಾಲೇಜುಗಳೂ ಪ್ರಾಚೀನ ವಿದ್ಯೆಗಳಾದ ನ್ಯಾಯ, ವೇದಾಂತ, ತರ್ಕ, ಮೀಮಾಂಸೆಗಳ ಬೋಧನೆಗೆ ಮೀಸಲಾದ ಸಂಸ್ಕೃತ ಮಹಾವಿದ್ಯಾಲಯವೂ ಇವೆ.

ಉಡುಪಿಗೆ ೩ ಮೈಲಿ ದೂರದಲ್ಲಿ ಸಮುದ್ರತೀರದಲ್ಲಿರುವ ವಡಭಾಂಡೇಶ್ವರ ನೈಸರ್ಗಿಕ ರೇವು ಮತ್ತು ಆರುಮೈಲಿ ದೂರದಲ್ಲಿರುವ ಮಣಿಪಾಲ ಇವು ಊರಿನ ಸುತ್ತಲಿರುವ ಪ್ರೇಕ್ಷಣೀಯ ಸ್ಥಳಗಳು.

ಇಲ್ಲಿಯ ಸ್ಥಳಪುರಾಣ ಹೀಗಿದೆ:— ನಾರಾಯಣನು ಪರಶುರಾಮಾವತಾರದಲ್ಲಿ ತನ್ನ ೨೧ ದಂಡಯಾತ್ರೆಯಾದಮೇಲೆ ಒಂದು ಯಾಗಮಾಡಿ ತನ್ನ ಸರ್ವಸ್ವವನ್ನೂ ಬ್ರಾಹ್ಮಣರಿಗೆ ದಾನಮಾಡಿದನು. ದಾನಮಾಡಿದ ನೆಲದಲ್ಲಿ ನಿಲ್ಲಲು ಇಷ್ಟವಿಲ್ಲದೆ ಅವನು ವರುಣನಿಂದ ಗೋಕರ್ಣದಿಂದ ಕನ್ಯಾಕುಮಾರಿಯವರೆಗೆ ಒಂದು ಪಟ್ಟಿನೆಲದ ಭಾಗವನ್ನು ಸಮುದ್ರ ಭಾಗದಿಂದ ಪಡೆದನು. ಈ ಭಾಗಕ್ಕೆ ಪರಶುರಾಮ ಕ್ಷೇತ್ರವೆಂದು ಹೆಸರು. ಪರಶುರಾಮನ ಶಿಷ್ಯನಾದ ರಾಮಭೋಜನೆಂಬುವನು ಇಲ್ಲಿಯ ದೊರೆಯಾದನು. ಯಾಗಭೂಮಿಗಾಗಿ ಈ ಭೂಮಿಯನ್ನು ಉಳುತ್ತಿರುವಾಗ ಒಂದು ಸರ್ಪವು ಕೊಲ್ಲಲ್ಪಟ್ಟಿತು. ಈ ಪಾಪಪರಿಹಾರಕ್ಕಾಗಿ ಪರಶುರಾಮನು ಅದರ ನಾಲ್ಕು ಮೂಲೆಯಲ್ಲಿಯೂ ಒಂದು ರಜತ ಪೀಠದ ಮೇಲೆ ನಾಗಪ್ರತಿಷ್ಠೆ ಮಾಡುವಂತೆ ಆಜ್ಞೆಮಾಡಿದನು ಮತ್ತು ಅಲ್ಲಿ ದೇವರನ್ನು ಪೂಜಿಸಿದರೆ ಅವನು ಶಕ್ತಿಯುಕ್ತನಾಗುವನೆಂದು ಹೇಳಿದನು. ಯುಗಾಂತ್ಯದಲ್ಲಿ ಪರಶುರಾಮನು ಪ್ರತ್ಯಕ್ಷನಾಗಿ ಯಜ್ಞಭೂಮಿಯಾದ ಈ ಮಹಾಕ್ಷೇತ್ರವು ಪ್ರಸಿದ್ಧವಾದ ಯಾತ್ರಾಸ್ಥಳವಾಗುವುದೆಂದು ಘೋಷಿಸಿದನು. ಈ ಸ್ಥಳವೇ ಎಲ್ಲರಿಂದಲೂ ಉಡುಪಿಯೆಂದು ಕರೆಯಲ್ಪಡುವ ಯಾತ್ರಾಸ್ಥಳ. ದಕ್ಷ ಪ್ರಜಾಪತಿಯ ಶಾಪವನ್ನು ಪರಿಹಾರಮಾಡಿಕೊಳ್ಳುವುದಕ್ಕಾಗಿ ಚಂದ್ರನು ಇಲ್ಲಿ ತಪಸ್ಸು ಮಾಡಿದನು. ಈ ಸ್ಥಳಕ್ಕೆ ಅಭಯಾರಣ್ಯವೆಂದು ಹೆಸರು. ಇದರ ಪಕ್ಕದಲ್ಲಿ ಚಂದ್ರಪುಷ್ಕರಿಣಿಯೆಂಬ ಸರೋವರವಿದೆ. ಸಂಸ್ಕೃತದಲ್ಲಿ ಉಡುಪ ಎಂದರೆ ಚಂದ್ರ ಎಂದರ್ಥ. ಅವನು ತಪಸ್ಸು ಮಾಡಿದ ಸ್ಥಳ. ಮಧ್ವಾಚಾರ್ಯರು ಶ್ರೀ ಕೃಷ್ಣ ವಿಗ್ರಹವನ್ನು ಇಲ್ಲಿ ಪ್ರತಿಷ್ಠೆ ಮಾಡಿದರು. ಈ ವಿಗ್ರಹವು ಸಾಲಗ್ರಾಮ ಶಿಲೆಯದಾದುದರಿಂದ ಇದರಲ್ಲಿ ಸರ್ವದಾ ಕೃಷ್ಣಸಾನ್ನಿಧ್ಯವಿದೆಯೆಂದು ಐತಿಹ್ಯ. ಇಲ್ಲಿ ನಡೆಯುವ ವಿಶೇಷ ಪೂಜೆಯಿಂದ ಇಲ್ಲಿಗೆ ಮಹತ್ವವುಂಟಾಗಿದೆ. ಇಲ್ಲಿಯ ದೇವರ ದರ್ಶನದಿಂದಲೇ ಮೋಕ್ಷಸಿದ್ಧಿಯೆಂಬುದು ಜನರ ನಂಬಿಕೆ. ಈ ವಿಗ್ರಹವು ರುಕ್ಮಿಣಿಯ ನಿತ್ಯ ಪೂಜೆಗಾಗಿ ಶ್ರೀಕೃಷ್ಣನ ಅಪ್ಪಣೆಯ ಪ್ರಕಾರ ವಿಶ್ವಕರ್ಮನಿಂದ ನಿರ್ಮಿತವಾದ ಮೇಲೆ ಅರ್ಜುನನು ಇದನ್ನು ರುಕ್ಮಿಣಿಯ ತೋಟದಲ್ಲಿ ಹುದುಗಿಸಿಟ್ಟನು. ಕಾಲಾನುಕಾಲದಲ್ಲಿ ಅದು ಗೋಪೀಚಂದನದಿಂದ ಆಚ್ಛಾದಿತವಾಯಿತು. ದ್ವಾರಕೆಯಿಂದ ಬಂದ ನಾವಿಕನೊಬ್ಬನು ಆ ದೊಡ್ಡಗಡ್ಡೆಯನ್ನು ತನ್ನ ಹಡಗಿನ ಲಂಗರಿಗಾಗಿ (ಹಡನನ್ನು ನಿಲ್ಲಿಸಲು ಉಪಯೋಗಿಸುವ ಭಾರವಾದ ವಸ್ತು) ಉಪಯೋಗಿಸಿಕೊಂಡು ಪಶ್ಚಿಮ ಸಮುದ್ರತೀರ ಪ್ರದೇಶಕ್ಕೆ ಬಂದನು. ಮಧ್ವಾಚಾರ್ಯರಿಗೆ ಸಮ್ಯಜ್ಞಾನದಿಂದ ಈ ವಿಷಯ ತಿಳಿದು ಅವರು ಆ ಹಡಗನ್ನು ನಿರೀಕ್ಷಿಸುತ್ತ ಸಮುದ್ರ ದಡದಲ್ಲಿ ಕಾಯುತ್ತಿದ್ದರು. ಆ ಹಡಗು ಸಮುದ್ರತೀರಕ್ಕೆ ಬಂದಾಗ ಒಂದು ದೊಡ್ಡ ಬಿರುಗಾಳಿ ಎದ್ದು ಹಡಗು ಮುಳುಗುವುದರಲ್ಲಿತ್ತು. ಮಧ್ವಾಚಾರ್ಯರು ಆ ಬಿರುಗಾಳಿಯನ್ನು ಶಮನಗೊಳಿಸಿದರು. ನಾವಿಕನು ತನ್ನ ಕೃತಜ್ಞತೆಗಾಗಿ ಆ ಗೋಪೀಚಂದನದ ಗಡ್ಡೆಯನ್ನು ಮಧ್ವಾಚಾರ್ಯರಿಗೆ ಕೊಟ್ಟನು. ಆಚಾರ್ಯರು ಅದನ್ನು ಒಡೆದು ನೋಡಿದಾಗ ಅದರಲ್ಲಿ ದಿವ್ಯ ಸುಂದರ ಮೂರ್ತಿ ಸಿಕ್ಕಲಾಗಿ ಅದನ್ನು ಮೂರು ಮೈಲಿ ದೂರದಲ್ಲಿದ್ದ ಉಡುಪಿಗೆ ತೆಗೆದುಕೊಂಡು ಹೋದರು. ಅವರು ಆ ದೇವರಿಗೆ ಮಧ್ವಸರೋವರದಲ್ಲಿ ಮಜ್ಜನ ಮಾಡಿಸಿ ಪಕ್ಕದ ದೇವಸ್ಥಾನದಲ್ಲಿ ಪ್ರತಿಷ್ಠಿಸಿ ಪೂಜಿಸಲು ಮೊದಲು ಮಾಡಿದರು. ತಮ್ಮ ಅನಂತರದಲ್ಲೂ ಶ್ರೀಕೃಷ್ಣ ಪೂಜೆಯು ನಿರಂತರವಾಗಿ ನಡೆಯಲೆಂದು ಆಚಾರ್ಯರು ಎಂಟು ಮಂದಿ ಬಾಲಯತಿಗಳಿಗೆ ಪರಮಹಂಸ ದೀಕ್ಷೆಯನ್ನಿತ್ತರು. ಈ ಎಂಟುಮಂದಿಗಳದೇ ಅಷ್ಟ ಮಠಗಳು. ದ್ವೈತಮತ ಸಿದ್ಧಾಂತ ಪ್ರಚಾರದ ಹೊಣೆಯೂ ಶ್ರೀಕೃಷ್ಣ ಪೂಜಾಧಿಕಾರವೂ ಈ ಯತಿಗಳದಾಯಿತು. ಅಂದು ಆಚಾರ್ಯರು ಮಾಡಿದ ಆ ವ್ಯವಸ್ಥೆ ಇಂದಿಗೂ ನಡೆದು ಬರುತ್ತಿದೆ. ಆಚಾರ್ಯರೇ ಶ್ರೀ ಕೃಷ್ಣನ ಪೂಜೆಯನ್ನು ಅಷ್ಟಮಠದ ಯತಿಗಳೇ ಸರದಿಯಂತೆ ೨ ತಿಂಗಳು

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಕಾಲ ನಡೆಸಬೇಕೆಂದು ನಿಷ್ಕರ್ಷಿಸಿದರು. ಮುಂದೆ ವಾದಿರಾಜ ಸ್ವಾಮಿಗಳ ಕಾಲಕ್ಕೆ ಈ ಪದ್ಧತಿ ಬದಲಾಯಿತು. ಅಲ್ಲಿಂದೀಚೆಗೆ ಪೂಜಾಧಿಕಾರದ ಅವಧಿ ಪ್ರತಿ ಮಠಕ್ಕೂ ೨ ವರ್ಷವೆಂದು ನಿಷ್ಕರ್ಷೆಯಾಯಿತು. ಹೀಗೆ ಸರದಿಯಂತೆ ಒಂದು ಮಠದ ಸ್ವಾಮಿಗಳು ಮತ್ತೊಂದು ಮಠಕ್ಕೆ ಬಿಟ್ಟುಕೊಡುವುದಕ್ಕೆ ಪರ್ಯಾಯವೆಂಬ ಹೆಸರು ಬಂದಿತು. ಇದು ಒಂದು ದೊಡ್ಡ ಸಂಭ್ರಮೋತ್ಸವವೆಂದು ಭಾವಿಸಲ್ಪಟ್ಟು ಈಗ ಆ ಉತ್ಸವವನ್ನು ಬಹು ವಿಜೃಂಭಣೆಯಿಂದ ನಡೆಸುತ್ತಾರೆ.

ಶ್ರೀ ಕೃಷ್ಣನ ಪ್ರತಿನಿತ್ಯದ ಪೂಜೆಗೆ ಮಧ್ವ ಸರೋವರದ ನೀರನ್ನೇ ಉಪಯೋಗಿಸುತ್ತಾರೆ. ಗರ್ಭಗೃಹದಲ್ಲಿ ಶ್ರೀ ಕೃಷ್ಣ ವಿಗ್ರಹವು ಪಶ್ಚಿಮಾಭಿಮುಖವಾಗಿ ಪ್ರತಿಷ್ಠಿತವಾಗಿದೆ. ಸ್ವಾಮಿಯ ದರ್ಶನವನ್ನು ಒಂಬತ್ತು ಚತುರಸ್ರವಾದ ರಂಧ್ರಗಳ ಕಿಟಕಿಯ ಮೂಲಕ ಮಾಡಬಹುದು. ಈ ಕಿಟಕಿಯು ಒಂದು ಬೆಳ್ಳಿಯ ಪರದೆಯಿಂದ ಮುಚ್ಚಲ್ಪಟ್ಟಿದೆ. ಇದರ ಮೇಲೆ ದೇವರ ೨೪ ಮೂರ್ತಿಗಳು ಚಿತ್ರಿತವಾಗಿವೆ. ಎದುರಿಗೆ ಒಂದು ಶಿಲಾಮಂಟಪವಿದೆ. ಇಲ್ಲಿ ಪ್ರತಿನಿತ್ಯವೂ ರಾತ್ರಿ ಚಾಮರ ಸೇವೆ ಮತ್ತು ಮಂಟಪ ಪೂಜೆಗಳು ನಡೆಯುತ್ತವೆ. ಈ ಮಂಟಪದ ಎದಿರು ಚಂದ್ರಶಾಲೆಯಿದೆ. ಇದರ ಮಧ್ಯದಲ್ಲಿಯೇ ಮೇಲೆ ತಿಳಿಸಿದ ನವ ದ್ವಾರಗಳಿರುವುದು. ಚಂದ್ರಶಾಲೆಯ ದಕ್ಷಿಣೋತ್ತರ ಪಾರ್ಶ್ವಗಳಲ್ಲಿ ಮುಖ್ಯಪ್ರಾಣ ಮತ್ತು ಗರುಡ ವಿಗ್ರಹಗಳಿವೆ. ಈ ವಿಗ್ರಹಗಳನ್ನು ವಾದಿರಾಜತೀರ್ಥರು ಪ್ರತಿಷ್ಠಿಸಿದರು. ಇವು ಅಯೋಧ್ಯೆಯಿಂದ ತಂದುವು.

ಕೃಷ್ಣದೇವಾಲಯವು ವಿಸ್ತಾರವಾಗಿದೆ. ಬೇರೆ ಬೇರೆ ಕಾರ್ಯಗಳು ಪ್ರತ್ಯೇಕವಾದ ಸ್ಥಳಗಳಲ್ಲಿ ನಡೆಯುವುವು. ಇಲ್ಲಿಯ ಪೂಜೆಯೂ ಬಹು ದೀರ್ಘಕಾಲ ನಡೆಯುತ್ತದೆ.

ಉಡುಪಿಯ ಆಧ್ಯಾತ್ಮದೀಪದಂತಿದ್ದು ಅದರ ಜ್ಞಾನಜ್ಯೋತಿ ಬಹುದೂರ ವಿವಿಧ ದಿಕ್ಕುಗಳಲ್ಲಿ ಪ್ರಸಾರವಾಗುತ್ತಿದೆ.



# ಆತ್ಮ ಸಂದರ್ಶನ

ಆತ್ಮವಸ್ತುವಿಗೆ ಅಥವ ತತ್ತ್ವಶಾಸ್ತ್ರಕ್ಕೆ ಸಂಬಂಧಿಸಿದ ವಿಚಾರವನ್ನು ಪ್ರಕಾಶಪಡಿಸುವ ಸಂವಾದಗಳಿಗೆ – 'ಆತ್ಮ ಸಂದರ್ಶನ' ಎಂದು ಕರೆದಿದ್ದೇನೆ. ಪ್ರಕೃತ ಕೆಲವನ್ನು ಮಾದರಿಗಾಗಿ ಉಪನಿಷತ್ತುಗಳಿಂದ, ಶ್ರೀರಾಮಕೃಷ್ಣರ ಭಾರತ ದೃಷ್ಟಾಂತ ಕಥೆಯಿಂದ, ಆರಿಸಿ ಪೋಣಿಸಿದ್ದೇನೆ, ಈ ಕಿರು ಪ್ರಬಂಧದಲ್ಲಿ.

ಛಾಂದೋಗ್ಯೋಪನಿಷತ್ತಿನಿಂದ ನಾರದ ಸನತ್ಕುಮಾರರ ಸಂಭಾಷಣೆಯನ್ನು ಅವಲೋಕಿಸೋಣ –

ನಾರದ :– ಪೂಜ್ಯರೇ, ನನಗೆ ಶೋಕವನ್ನು ದಾಟುವ ವಿದ್ಯೆಯನ್ನು ಉಪದೇಶಿಸಿ.

ಸನತ್ಕುಮಾರ :– ತಮಗೆ ಯಾವ-ಯಾವ ವಿದ್ಯೆ ಬರುತ್ತದೋ ಅದನ್ನು ಮೊದಲು ತಿಳಿಸಿ - ಅನಂತರ ಮುಂದಕ್ಕೆ ಹೇಳಿಕೊಡುತ್ತೇನೆ.

ನಾರದರು:– ಚತುರ್ವೇದವನ್ನು ಬಲ್ಲೆನು, ಇತಿಹಾಸ, ಪುರಾಣ, ವ್ಯಾಕರಣ, ಶ್ರಾದ್ಧ ಕಲ್ಪನ, ಗಣಿತ, ಶಕುನ, ನಿಕ್ಷೇಪ ಕಂಡು ಹಿಡಿಯುವ ಶಾಸ್ತ್ರ, ತರ್ಕಶಾಸ್ತ್ರ, ನೀತಿ ಶಾಸ್ತ್ರ, ನಿರುಕ್ತ, ಶಿಕ್ಷೆ, ಕಲ್ಪ, ಛಂದಸ್ಸನ್ನು ಬಲ್ಲೆ, ಭೂತವಿದ್ಯೆ, ಧನುರ್ವೇದ, ಗಂಧರ್ವರ ನೃತ್ಯಗೀತ ವಾದ್ಯ ಮುಂತಾದ ವಿದ್ಯೆ, ಶಿಲ್ಪ ವಿದ್ಯೆ ... ಹೀಗೆ ಹಲವಾರು ವಿದ್ಯೆ ಕಲಿತು ಜ್ಞಾನಿಯಾಗಿದ್ದರೂ ಶೋಕದಲ್ಲಿ ಮುಳುಗಿರುತ್ತೇನೆ; ಆದುದರಿಂದ ಪೂಜ್ಯರೆ, ಈ ಶೋಕದಿಂದ ದಾಟುವ ವಿದ್ಯೆಯನ್ನು ಉಪದೇಶಿಸಿ.

ಸನತ್ಕುಮಾರ:– ತಾವು ಮರೆತಹಾಗೆ ಕಾಣುತ್ತದೆ. ಶೋಕವನ್ನು ಗೆಲ್ಲುವುದಕ್ಕೆ ಪರಮಾತ್ಮ ವಿದ್ಯೆಯೇ ದಿವ್ಯಾಷಧ. ಅರಿಯಲು ಪ್ರಯತ್ನಿಸಿ.

ಈ ಮೇಲಿನ ಸಂವಾದದಿಂದ - ಒಂದು ವಿಚಾರ ಸ್ಪಷ್ಟವಾಯಿತು. ನಾವು ಈಗಿನ ಕಾಲಕ್ಕೆ ನಾರದರಿಗಿಂತ ಹೆಚ್ಚಿನ ವಿಜ್ಞಾನಗಳನ್ನು ಕಲಿತಿರಬಹುದು. ನಮ್ಮ ವಿಜ್ಞಾನದ ವಿಶ್ವಕೋಶವು ಬಲುದೊಡ್ಡದಾಗಿರುತ್ತದೆ. ಆದರೇನು? ನಾವು ಶೋಕವನ್ನು ದಾಟುವ ವಿದ್ಯೆಯನ್ನು ಕಲಿತಿರುವುದಿಲ್ಲ. ಎಷ್ಟು ವಿಜ್ಞಾನವನ್ನು ಹೆಚ್ಚಿಸಿಕೊಂಡರೂ ಶೋಕವನ್ನು ತಪ್ಪಿಸುವುದಕ್ಕೆ ಆಗಿರುವುದಿಲ್ಲ. ನಮ್ಮ ವಿದ್ಯೆಯು ಭೋಗವನ್ನು ಹೆಚ್ಚಿಸಬಹುದು. ಆದರೆ ಶೋಕದ ನಿವಾರಣೆಗೆ ಪರಮಾತ್ಮ ವಿದ್ಯೆಯೇ ಬೇಕು, ಅಲ್ಲವೇ!

* * * *

ನಚಿಕೇತ ಯಮಧರ್ಮರಾಯರ ಸಂವಾದವನ್ನು ಕಾಠಕೋಪನಿಷತ್ತಿನಿಂದ ಆರಿಸಿದೆ.

ನಚಿಕೇತ: ಯಮಧರ್ಮರಾಯ, ತಾವು ನನಗೆ ಹುಟ್ಟುಸಾವುಗಳಿಲ್ಲದ, ಪುಣ್ಯಪಾಪಗಳಿಲ್ಲದ ಪರಮಾತ್ಮನ ಸ್ವರೂಪವನ್ನು ತಿಳಿಯಪಡಿಸಿ.

ಯಮ: ನಚಿಕೇತ! ಆ ವಿದ್ಯೆಯೇಕೆ? ... ಅದನ್ನು ತಿಳಿಯುವುದು ದೇವತೆಗಳಿಗೇನೆ ಕಷ್ಟವಾಗಿರುತ್ತದೆ. ಆ ವಿದ್ಯೆ ಬಿಟ್ಟು ಬೇರೆ ನಿನ್ನ ಇಷ್ಟಾರ್ಥಗಳನ್ನು ಬೇಡು. ಪೂರ್ಣಾಯುಸ್ಸು ಬೇಕೆ? ಮಕ್ಕಳು, ಮೊಮ್ಮಕ್ಕಳು, ಧನ - ಕನಕ. ರಥಗಳು, ಭೂಮಂಡಲದ ಸಾಮ್ರಾಜ್ಯ - ಇವುಗಳೆಲ್ಲವನ್ನು ಬೇಕಾದರೆ ಕೇಳಿಕೊ, ಕೊಡುತ್ತೇನೆ.

ನಚಿಕೇತ. ಯಮಧರ್ಮರಾಯ! ತಾವು ಹೇಳಿದ ಭೋಗಗಳೆಲ್ಲ ಏನು ಸುಖವನ್ನು ಕೊಟ್ಟಾವು? ಅವು ಇಂದ್ರಿಯಗಳನ್ನು ಹಾಳುಮಾಡುವುವು, ಮೃತ್ಯುದೇವನೆ, ಧನ-ಕನಕದಿಂದ ಮಾನವನಿಗೆ ತೃಪ್ತಿಯಾದೀತೆ? ನಾವು ಎಷ್ಟುಕಾಲ ಬದುಕಿದರೆ ತಾನೇ ಸಾಕೆನಿಸೀತು? ಇವೆಲ್ಲವು ನಿನ್ನ ದರ್ಶನದಿಂದಲೇ ನಮಗೆ ಸಿಕ್ಕಂತೆಯೇ ಸರಿ! ... ಆದುದರಿಂದ ತಾವು ತಿಳಿಸಿದ ಭೋಗ-ಭಾಗ್ಯ ವಸ್ತು ನನಗೆ ಬೇಡ, ನನಗೆ ಬೇಕಾದ್ದು ಪರಾವಿದ್ಯೆ. ಅದನ್ನೇ ನನಗೆ ಉಪದೇಶಿಸಿ.

ಯಮ: ನೀನು ಧೀರ. ಬರೀ ಭೋಗಕ್ಕೆ ಆಸೆಪಡುವ ಅನೇಕ ಜನರನ್ನು ನೋಡಿದ್ದೇನೆ. ನೀನು ಪರಾವಿದ್ಯೆಯನ್ನು ಅರಿಯಲು - ಬೇರೆ 'ಇಹ'ದ ಆಸೆಗಳನ್ನು ಬಿಟ್ಟೆಯಲ್ಲಾ ...

* * * *

ಯಾಜ್ಞವಲ್ಕ್ಯರು ಮಹಾಮಹಿಮರು. ಇವರ ಧರ್ಮಪತ್ನಿ ವಿದ್ಯಾವತಿ ಮೈತ್ರೇಯಿ, ಇವರ ಸಂವಾದವನ್ನು ಬೃಹದಾರಣ್ಯಕೋಪನಿಷತ್ತಿನಲ್ಲಿ ಉಲ್ಲೇಖಿಸಿದೆ; ಸಂಕ್ಷಿಪ್ತ ವಿವರಣೆ ಹೀಗಿದೆ –

ಯಾಜ್ಞವಲ್ಕ್ಯ: ಮೈತ್ರೇಯಿ, ನಾನು ಸನ್ಯಾಸಿಯಾಗಬೇಕು, ನನಗೆ ನೀನೂ, ಕಾತ್ಯಾಯನಿಯೂ ಅನುಮತಿ ನೀಡಿ, ಇಗೊ ಈ ಧನ - ಕನಕವನ್ನು, ನೀವೀರ್ವರೂ ಹಂಚಿಕೊಳ್ಳಿ.

ಮೈತ್ರೇಯಿ :– ಸ್ವಾಮಿ, ಇಡೀ ಭೂಮಿಯೇ ಧನಪೂರ್ಣವಾಗಿದ್ದರೆ ಮುಕ್ತಿ ಲಭಿಸುವುದೇ?

ಯಾ :– ಇಲ್ಲ, ಧನದಿಂದ ಮೋಕ್ಷದ ಆಸೆ ಮಾಡುವ ಹಾಗಿಲ್ಲ; ಎಲ್ಲರಂತೆ ನೀನು ಸುಖವಾಗಿರುವೆ ಅಷ್ಟೆ.

ಮೈ :– ಪರಮಪುರುಷಾರ್ಥವನ್ನು ಕೊಡಲಾರದ ಈ ಹಣದಿಂದ ನನಗೆ ಏನೂ ಆಗಬೇಕಾದ್ದಿಲ್ಲ. ಯಾವುದನ್ನು ಪಡೆದರೆ ನನಗೆ ಮುಕ್ತಿ–ಶ್ರೇಯಸ್ಸು ಲಭಿಸುವುದೋ ಅದನ್ನೇ ಉಪದೇಶಿಸಿ.

ಮತ್ತೀಗೆರೆ ಅನಂತು

ಯಾ:- ಪರಮೇಶ್ವರನು ನಮ್ಮ ಹೃದಯದಲ್ಲಿಯೇ ಇದ್ದು ನಮ್ಮ ಆತ್ಮನೇ ಆಗಿರುತ್ತಾನೆ. ಆತ್ಮನಿಗಾಗಿ ಮಿಕ್ಕದ್ದೆಲ್ಲವೂ ಇರುವುದೇ ಹೊರತು ಯಾವುದಕ್ಕಾಗಿಯೂ ಆತ್ಮನಿಲ್ಲ.

ಧನ-ಕನಕ, ಧರ್ಮ, ಸಂಸಾರ, ಲೋಕಗಳು, ದೇವತೆಗಳು, ಪಶುಪಕ್ಷಿ ಪ್ರಾಣಿಗಳು ಎಲ್ಲವೂ ನಮ್ಮ ಆತ್ಮನಾಗಿರುವ ಪರಮೇಶ್ವರನಿಗಾಗಿಯೇ ಪ್ರಿಯವಾಗಿರುತ್ತವೆ. ನಮ್ಮ ಮೇಲೆ ನಮಗೆ ಎಲ್ಲಕ್ಕಿಂತಲೂ ಹೆಚ್ಚಿನ ಪ್ರೀತಿಯಿರುವುದಕ್ಕೆ ಆತ್ಮನೇ ಕಾರಣ. ಪರಮಾತ್ಮನ ಚೈತನ್ಯವೇ ಎಲ್ಲದರಲ್ಲೂ ಇದೆ.

ಮೈ:- ಸ್ವಾಮಿ, ಈಗಲೂ ನಾವು ಪರಮಾತ್ಮನಲ್ಲಿಯೇ ಇರುವೆವು, ಹಾಗಾದರೆ 'ಪರಮಾತ್ಮನಿಗಿಂತ ಬೇರೆಯಾಗಿ ಈಗಲೂ ಏನೇನೂ ಇಲ್ಲವೇ ಇಲ್ಲ ಎಂಬುದನ್ನು ಹೇಗೆ ತಿಳಿದುಕೊಳ್ಳಬೇಕು ?

ಯಾ:- ನಿನ್ನ ಪ್ರಶ್ನೆಯನ್ನು ದೃಷ್ಟಾಂತದ ಮೂಲಕ ಉತ್ತರಿಸುತ್ತೇನೆ-

ನಗಾರಿಯನ್ನು ಹೊಡೆಯುತ್ತಿರುವಾಗ ಹೊರಗೆ ಕೇಳಿಬರುವ ಬೇರೆ-ಬೇರೆಯ ಶಬ್ದಗಳನ್ನು ಅವುಗಳ ರೂಪದಿಂದಲೇ ಅರಿಯುವುದಕ್ಕೆ ಆಗುವುದಿಲ್ಲ. 'ಇದು ನಗಾರಿಯ ಶಬ್ದಗಳು' ಎಂದು ಅರಿಯುವುದರಿಂದ ಮಾತ್ರವೇ ಅವುಗಳನ್ನು ಅರಿಯಬಹುದು. ನಗಾರಿಯನ್ನು ಹೊಡೆದದ್ದರಿಂದಾದದ್ದೆಂದು ಶಬ್ದಸಾಮಾನ್ಯವನ್ನು ಅರಿತುಕೊಂಡರೆ ಮಾತ್ರ ಬೇರೆ-ಬೇರೆಯ ವಿಶೇಷ ಶಬ್ದಗಳನ್ನು ಅರಿತುಕೊಂಡಂತಾಗುತ್ತದೆ. ಹೀಗೆಯೇ ವೀಣೆಯನ್ನು ಬಾರಿಸುವಾಗ ಆಗುವ ಹೊರಗಿನ ಶಬ್ದಗಳನ್ನು ಆಯಾ ರೂಪದಿಂದಲೇ ಅರಿತುಕೊಳ್ಳುವುದಕ್ಕೆ ಆಗುವುದಿಲ್ಲ; ವೀಣೆಯ ಧ್ವನಿಯನ್ನು ಅರಿತುಕೊಳ್ಳುವುದರಿಂದಲೇ, – ಇದು ವೀಣೆಯನ್ನು ಬಾರಿಸುವುದರಿಂದಾದ ಧ್ವನಿಯೆಂದು ಸಾಮಾನ್ಯವನ್ನು ಅರಿತುಕೊಳ್ಳುವುದರಿಂದಲೇ – ಆಯಾ ಶಬ್ದಗಳನ್ನು ಅರಿತುಕೊಳ್ಳಬಹುದು; ಲೋಕದಲ್ಲಿ ಚೇತನಗಳು, ಅಚೇತನಗಳೂ ಅನೇಕವಾಗಿರುತ್ತವೆ. ಅವುಗಳು ಸಾಮಾನ್ಯ, ವಿಶೇಷರೂಪವಾಗಿಯೇ ತೋರಿಕೊಳ್ಳುತ್ತವೆ. ಎಲ್ಲೆಲ್ಲಿಯೂ ಸಾಮಾನ್ಯವನ್ನು ಅರಿತುಕೊಳ್ಳುವುದರಿಂದಲೇ ವಿಶೇಷಗಳನ್ನು ಅರಿತುಕೊಳ್ಳಬಹುದಾಗಿರುತ್ತದೆ. ನಗಾರಿಶಬ್ದ, ವೀಣೆಯಶಬ್ದ ಎಂಬ ಸಾಮಾನ್ಯಗಳು ಕೂಡ 'ಶಬ್ದ' ಎಂಬ ಸಾಮಾನ್ಯದಲ್ಲಿಯೇ ಅಡಕವಾಗಿ ಬಿಡುವಂತೆ ಲೋಕದಲ್ಲಿ ಕಾಣಬರುವ ಸಾಮಾನ್ಯ, ವಿಶೇಷಗಳೆಲ್ಲವೂ ಕೊನೆಗೆ ಚೈತನ್ಯ ರೂಪವಾದ ಬ್ರಹ್ಮದಲ್ಲಿಯೇ ಅಡಕವಾಗಿರುತ್ತದೆ. ಬ್ರಹ್ಮವನ್ನು ಬಿಟ್ಟು ಯಾವ ಶಬ್ದ-ಸ್ಪರ್ಶ ರೂಪರಸ ಗಂಧಗಳೂ ಇರುವುದೇ ಇಲ್ಲ.

* * * *

ಒಮ್ಮೆ ಅರ್ಜುನನ ಮನದಲ್ಲಿ ಅಹಂಕಾರ ತಲೆದೋರಿತು. ಇದನ್ನು ಶ್ರೀ ಕೃಷ್ಣ ಪರಿಹರಿಸಿದ ಬಗೆ (ಶ್ರೀ ರಾಮಕೃಷ್ಣರ ದೃಷ್ಟಾಂತ ಕಥೆಯಿಂದ ಆರಿಸಿದೆ) ಹೀಗಿದೆ-

ಅಹಿಂಸಾವ್ರತವನ್ನು ಅವಲಂಬಿಸಿದ ಬ್ರಾಹ್ಮಣನ ಹತ್ತಿರಕ್ಕೆ ಅರ್ಜುನ ಹೋದ.

ಅರ್ಜುನ: ಸ್ವಾಮಿ, ನೀವು ಯಾವ ಜೀವಿಯನ್ನೂ ಹಿಂಸಿಸುವುದಿಲ್ಲ, ಶುಷ್ಕತೃಣದಿಂದ ಜೀವಿಸುತ್ತಿದ್ದೀರಿ. ಆದರೂ ಈ ಹರಿತವಾದ ಕತ್ತಿಯನ್ನೇಕೆ ಧರಿಸಿದ್ದೀರಿ ?

ಬ್ರಾಹ್ಮಣ:- ನಾಲ್ಕು ಜನರನ್ನು ಕೊಲ್ಲಬೇಕಾಗಿದೆ.

ಅ:- ಯಾರವರು ?

ಬ್ರಾ:- ದುರಾತ್ಮ ನಾರದ

ಅ:- ಯಾಕೆ? ಅವರೇನು ಮಾಡಿದರು?

ಬ್ರಾ:- ಅವನು ತನ್ನ ಕೀರ್ತನೆ, ಭಜನೆ, ಪ್ರಾರ್ಥನೆಯಿಂದ ನನ್ನ ಸ್ವಾಮಿಯನ್ನು ಯಾವಾಗಲೂ ಎಚ್ಚರಗೊಳಿಸುತ್ತಾನೆ. ಹಗಲು-ಇರುಳು ಹೊತ್ತು-ಗೊತ್ತು ಇಲ್ಲದೆ ಕೀರ್ತನೆಯಿಂದ ನಮ್ಮ ಸ್ವಾಮಿಯ ಶಾಂತಿಯನ್ನೇ ಭಂಗಗೊಳಿಸಿದ್ದಾನೆ.

ಅ:- ಎರಡನೆಯವ ಯಾರು ?

ಬ್ರಾ:- ಆ ಲಜ್ಜೆಗೆಟ್ಟ ದ್ರೌಪದಿ

ಅ:- ಅವಳೇನು ತಪ್ಪು ಮಾಡಿದಳು ?

ಬ್ರಾ:- ನನ್ನ ಸ್ವಾಮಿ ಊಟಕ್ಕೆ ಕೂರಬೇಕು; ಆಗಲೇ ಅವನನ್ನು ಕೂಗಿ ಕರೆಯಬೇಕೆ ಈ ತಾಯಿ ? ನನ್ನ ಸ್ವಾಮಿ ಊಟಮಾಡುವುದನ್ನು ಬಿಟ್ಟು - ಕಾಮ್ಯಕ ವನಕ್ಕೆ ಧಾವಿಸಿ ಹೋಗಬೇಕಾಯಿತು. ಇಷ್ಟೇ ಅಲ್ಲದೆ, ಆಕೆ ತಿಂದುಬಿಟ್ಟ ಎಂಜಲನ್ನು ನನ್ನ ಸ್ವಾಮಿಗೆ ಕೊಡುವಷ್ಟು ಹಮ್ಮು ತೋರಿಸುವುದೇ ? ಎಂಥ ಉದ್ಧಟತನದ ಹೆಂಗಸು ?

ಅ:- ಮೂರನೆಯವ ಯಾರು ?

ಬ್ರಾ:- ಅವನೇ, ಆ ಹೃದಯ ಶೂನ್ಯ ಪ್ರಹ್ಲಾದ; ನನ್ನ ಸ್ವಾಮಿಯನ್ನು ಕುದಿಯುವ ಎಣ್ಣೆಯ ಕೊಪ್ಪರಿಗೆಯಲ್ಲಿ ಇಳಿಯುವಂತೆ ಮಾಡಲು ಹಿಂಜರಿಯಲಿಲ್ಲ. ಆನೆಯ ಕಾಲಿನಿಂದ ತುಳಿಯುವಂತೆ ಮಾಡಲು ಹಿಂಜರಿಯಲಿಲ್ಲ.

ಅ:- ನಾಲ್ಕನೆಯವನು ಯಾರು ?

ಬ್ರಾ:- ಆ ಪಾತಕಿ ಅರ್ಜುನ

ಅ:- ಯಾಕೆ ? ಅವನೇನು ತಪ್ಪು ಮಾಡಿದ ?

ಬ್ರಾ:- ಆ ಪಾತಕಿ - ನನ್ನ ಸ್ವಾಮಿಯನ್ನು ಕುರುಕ್ಷೇತ್ರದಲ್ಲಿ ತನ್ನ ರಥದ ಸಾರಥಿಯನ್ನಾಗಿ ಮಾಡಿಕೊಳ್ಳುವುದೇ ?

ಈ ಮಾತುಗಳನ್ನು ಕೇಳಿದ ಅರ್ಜುನನಿಗೆ ತನ್ನ ಅಹಂಕಾರದ ಭಾವನೆ ಅಳಿದು ಹೋಯಿತು. ಇಲ್ಲಿ "ಅಹಂ ದೂರತಸ್ತೇ ಪದಾಂಭೋಜಯುಗ್ಮ" ಎಂಬ ಅಮೃತ ವಾಣಿಯನ್ನು ಸ್ಮರಿಸಬಹುದು.



## ಹರಿದಾಸ ವಾಣಿ

# ಶ್ರೀ ಪುರಂದರದಾಸರು

(ಹಿಂದಿನ ಸಂಚಿಕೆಯ ತರುವಾಯ)

ಶ್ರೀನಿವಾಸ ನಾಯಕ ಪತ್ನೀ ಸಮೇತನಾಗಿ ಕಾಲು ನಡಿಗೆಯಲ್ಲಿ ಹಂಪೆಯನ್ನು ಸೇರಿ ವ್ಯಾಸರಾಯರ ಆಶ್ರಯದಲ್ಲಿ ನಿಂತ. ವ್ಯಾಸರಾಯರು ಮಹಾನ್ ವ್ಯಕ್ತಿಗಳು. ಅಪರೋಕ್ಷ ಜ್ಞಾನಿಗಳು. ಶ್ರೀನಿವಾಸ ನಾಯಕನನ್ನು ಕಂಡ ಕೂಡಲೇ ಆತನು ನಾರದಾಂಶ ಸಂಭೂತನೆಂದು ತಿಳಿದು ಆತನನ್ನು ತಮ್ಮ ದಾಸ ಕೂಟಕ್ಕೆ ಸೇರಿಸಿಕೊಂಡು, ಆತನಲ್ಲಿ ಅಡಗಿದ್ದ ಸಂಸ್ಕಾರ ಪ್ರತಿಭೆಗಳನ್ನು ಮನಗೊಂಡು ಶ್ರೀನಿವಾಸ ನಾಯಕನನ್ನು ದ್ವೈತಮತ ಸಿದ್ಧಾಂತದಲ್ಲೂ ಸಂಗೀತ ಶಾಸ್ತ್ರದಲ್ಲಿಯೂ ಅದ್ವಿತೀಯ ಪಂಡಿತನನ್ನಾಗಿ ಮಾಡಿ ದ್ವೈತ ಮತ ಸಿದ್ಧಾಂತ ಪ್ರಚಾರ ಕಾರ್ಯದಲ್ಲಿ ಮುಂದುವರಿಯಲು ಪ್ರೇರೇಪಿಸಿದರು. ಗುರುಗಳು ಶ್ರೀನಿವಾಸನಾಯಕನಿಗೆ ಪುರಂದರ ವಿಠಲನೆಂಬ ಅಂಕಿತವನ್ನು ಕೊಟ್ಟರು, ಅಂದಿನಿಂದ ಶಿಷ್ಯ ಪುರಂದರದಾಸರಾದರು.

ಪುರಂದರದಾಸರು ವ್ಯಾಸರಾಯರಿಂದ ಉಪದೇಶ ಪಡೆದ ಮಂತ್ರವನ್ನು ಪುನಶ್ಚರಣೆ ಮಾಡಿ ಮಂತ್ರದಲ್ಲಿ ಸಿದ್ಧಿ ಪಡೆದು ಶ್ರೀಹರಿಯ ಸಾಕ್ಷಾತ್ಕಾರವನ್ನು ಪಡೆದರು. ಆಗ ಆರಾಣ ರಾಗದಲ್ಲಿ 'ಮೋಸ ಹೋದೆನಲ್ಲ' ಎಂದು ಹಾಡಿದರು. ಈ ಕೃತಿಯ ಚರಣದಲ್ಲಿ ಯೌವನದಲ್ಲಿ ಹರಿಪಾದ ನಂಬದೆ ಮುವತ್ತು ವರ್ಷ ಮೋಹಾಬ್ಧಿಯಲ್ಲಿ ಬಿದ್ದು ಎಂದು ಕಳೆದು ಹೋದಕಾಲವನ್ನು ಸ್ಮರಿಸಿ ಹಾಡಿರುತ್ತಾರೆ.

ದಾಸರು ಬೆಳಗ್ಗೆ ಎದ್ದು ಸ್ನಾನ ಸಂಧ್ಯಾದಿಗಳನ್ನು ಮುಗಿಸಿ ಹೆಗಲಿಗೆ ಜೋಲಿ ಹಾಕಿಕೊಂಡು ಕಾಲಿಗೆ ಗೆಜ್ಜೆ ಕಟ್ಟಿ ತಂಬೂರಿಯನ್ನು ಮೀಟಿ ಚಿಟಿಕೆಗಳಿಂದ ತಾಳಹಾಕುತ್ತಾ ಹಂಪೆಯ ಬೀದಿ ಬೀದಿಗಳಲ್ಲಿ ನಾಮ ಸಂಕೀರ್ತನ ಮಾಡುತ್ತಾ ಹೋಗುತ್ತಿದ್ದರು.

**ವಿದ್ವಾನ್ ಜಿ. ತಿಮ್ಮಪ್ಪಯ್ಯ**

ಈ ಕಾಲದಲ್ಲಿ ದೇವತಾಸ್ತುತಿ, ನೀತಿ ಬೋಧಕ ಜ್ಞಾನಮಾರ್ಗ, ವೇದಾಂತ ವಿಚಾರ ಹೀಗೆ ಸಮಾಜವನ್ನು ತಿದ್ದ ತಕ್ಕಂತಹ ಕೀರ್ತನೆಗಳನ್ನು ಹಾಡಿಕೊಂಡು ಹೋಗುತ್ತಿದ್ದರೆ, ಗೃಹಸ್ಥರು ಅಕ್ಕಿ ಬೇಳೆ ತರಕಾರಿ ಬೆಲ್ಲ ಮುಂತಾದವುಗಳನ್ನು ಭಿಕ್ಷೆ ಹಾಕುತ್ತಿದ್ದರು.

ಆಯಾದಿನಕ್ಕೆ ಬೇಕಾದಷ್ಟು ಮಾತ್ರ ಆಹಾರ ಪದಾರ್ಥಗಳನ್ನು ತಂದು ಅಡಿಗೆ ಮಾಡಿ ದೇವತಾ ಸಮರ್ಪಣೆ ಮಾಡಿ ಬಂದ ಅಭ್ಯಾಗತರಿಗೆ ನೀಡಿ ಉಳಿದಿದ್ದನ್ನು ಕುಟುಂಬದವರೊಡನೆ ಭುಂಜಿಸುತ್ತಿದ್ದರು. ಇದನ್ನೇ ಉಂಛವೃತ್ತಿ ಎನ್ನುವುದು.

ವೇದ ಉಪನಿಷತ್ತು ಪುರಾಣಗಳ ಪ್ರಕಾರವಾಗಿ ಕನ್ನಡ ಭಾಷೆಯಲ್ಲಿ ಸದ್ಭಾವನೆಯನ್ನುಂಟು ಮಾಡುವ ಕೃತಿಗಳನ್ನು ರಚಿಸಿ ಹಾಡುತ್ತಿದ್ದರು. ಆದುದರಿಂದಲೇ ದಾಸರ ಕೀರ್ತನೆಗಳನ್ನು 'ಪುರಂದರೋಪನಿಷತ್' ಎಂದು ಕರೆಯುವುದು,

ದಾಸರು ಹಂಪೆ – ವಿಜಯನಗರದ ಬೀದಿಗಳಲ್ಲಿ ವೇದ ವಿರುದ್ಧವಾದ ಸಿದ್ಧಾಂತಗಳನ್ನು ಖಂಡಿಸಿ ನಾಸ್ತಿಕರಿಗೆ ಹರಿಭಕ್ತಿಯನ್ನು ಬೋಧಿಸುತ್ತ, ಜನರಲ್ಲಿ ಅಜ್ಞಾನಾಂಧಕಾರವನ್ನು ಹೋಗಲಾಡಿಸುವಂತಹ ಅನೇಕ ಕೃತಿಗಳನ್ನು ರಚಿಸಿ ಅತ್ಯಂತ ಮಧುರವಾದ ಕಂಠದಲ್ಲಿ ಗಾನ ಮಾಡುತ್ತ ಬೀದಿ ಬೀದಿಗಳಲ್ಲಿ ಬರುತ್ತಿದ್ದರೆ, ಆಬಾಲ ಗೋಪಾಲರಾದಿಯಾಗಿ ನಾದಮಾಧುರ್ಯಕ್ಕೆ ಮನಸೋತು ದಾಸರ ಗಾಯನವನ್ನು ಕೇಳುತ್ತಾ ನಿಂತು ಬಿಡುತ್ತಿದ್ದರು. ಈ ಮಹನೀಯರು ಸಾಧಿಸಿದ ಕಾರ್ಯಗಳಲ್ಲಿ ಸಂಗೀತಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಟ್ಟಿದ್ದಾರೆ. ದಾಸರ ಕಾಲದಲ್ಲಿ ಭಾರತೀಯ ಗಾನ ಪದ್ಧತಿಗಳಲ್ಲಿ ಸಂಕರವಾಗಿ ದಕ್ಷಿಣ ಭಾರತದಲ್ಲಿಯೂ ಹರಡಲು ಪ್ರಾರಂಭವಾಗಿತ್ತು.

ಅಂಥ ಸಂದರ್ಭದಲ್ಲಿ ದಾಸರು ಸರಳ ಹೆಜ್ಜೆ ಸ್ಥಾಯಿ, ತಗ್ಗು ಸ್ಥಾಯಿ, ಸ್ವರ, ಜಂಟಿ, ಅಲಂಕಾರ ಗೀತೆ, ಸುಳಾದಿ ಮೊದಲಾದ ಪ್ರಬಂಧಗಳನ್ನು ರಚಿಸಿ ಶಿಷ್ಯರಿಗೆ ಬೋಧಿಸುತ್ತಿದ್ದರು. ಶುದ್ಧವಾದ ಭಾರತೀಯ ಗಾನ ಪದ್ಧತಿಯನ್ನು ಉದ್ಧಾರ ಮಾಡಿದರು. ಇಂದಿಗೂ ಕರ್ನಾಟಕ ಸಂಗೀತ ಪದ್ಧತಿ ದಾಸರ ಮಾರ್ಗದರ್ಶನದಂತೆ ನಡೆಯುತ್ತಿದೆ. ದಾಸರು ಕರ್ನಾಟಕ ಸಂಗೀತ ಪರಂಪರೆಗೆ ಆದಿ ಗುರುಗಳು.

ದಾಸರ ಸಂಗೀತ ಲಕ್ಷಣ ಕೋವಿದರಾದುದರಿಂದ ಪ್ರಾಚೀನರಾಗಗಳಲ್ಲಿ ಪ್ರಥಮವಾಗಿ ಕಲೋಪಾಸನೆಗೆ ಮಾಯಾ ಮಾಳವ ಗೌಳ



## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸ ಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ರಾಗವನ್ನು ಗ್ರಹಿಸಿ ಪ್ರಾಥಮಿಕ ವಿದ್ಯೆಗಳಿಗೆ ಅನುಕೂಲವಾಗುವಂತೆ ಧ್ರುವಾದಿ ಸಪ್ತತಾಳಗಳ ಗೀತೆ ಸುಳಾದಿಗಳನ್ನು ರಚಿಸಿದ್ದಾರೆ.

ಪ್ರಸ್ತುತ ವಿಶೇಷವಾಗಿ ಪ್ರಚಾರದಲ್ಲಿರುವ ಶಂಕರಾಭರಣ, ಕಲ್ಯಾಣಿ, ತೋಡಿ, ಭೈರವಿ, ಕಾಂಭೋಜಿ, ಆನಂದ ಭೈರವಿ, ಶ್ರೀರಾಗ, ಇತ್ಯಾದಿ ಅನೇಕ ರಾಗಗಳನ್ನು ಸಹ ದಾಸರು ಪರಿಷ್ಕರಿಸಿ ಅವುಗಳಲ್ಲಿ ಕೀರ್ತನೆ ರಚಿಸಿದ್ದಾರೆ.

ದಾಸರಿಗೆ ವರದಪ್ಪ, ಗುರುರಾಯ, ಅಭಿನವಮಧ್ವಪತಿ ಎಂಬ ಗಂಡು ಹಾಗೂ ರುಕ್ಮಿಣಿ ಎಂಬ ಹೆಣ್ಣು ಮಕ್ಕಳು ಇದ್ದರು.

ಪುರಂದರ ದಾಸರು "ಪುರಂದರ ವಿಠಲ" ಎಂಬ ಅಂಕಿತದಿಂದ ಅನೇಕ ವಿಧವಾದ ಕೀರ್ತನೆಗಳನ್ನು ಬರೆದಿರುತ್ತಾರೆ. ದಾಸರ ಮಕ್ಕಳು ಕೂಡ ದಾಸರಂತೆಯೇ ಸಂಗೀತದಲ್ಲಿ ಪಂಡಿತರಾಗಿದ್ದುದರಿಂದ ಆಗಿಂದಾಗ್ಗೆ ದಾಸರ ಕೀರ್ತನೆಗಳನ್ನು ಬರೆದು ಕೊಂಡಿದ್ದರಿಂದ ಈಗ ಅವರ ಕೀರ್ತನೆಗಳು ದೊರಕುವಂತಾಯಿತು.

ಮಾಂಜಿ ಭೈರವಿ. ದ್ವಿಜಾವನ್ತಿ, ಶಾಮ, ಕಲ್ಯಾಣಿ, ಮಾಧವಿ, ಮಧುಮಾಧವಿ, ವಸಂತ ಭೈರವಿ ಇತ್ಯಾದಿ ಅನೇಕ ರಾಗಗಳಲ್ಲಿ ಕೂಡಿ ದಾಸರು ಕೀರ್ತನೆಗಳನ್ನು ರಚಿಸಿದ್ದಾರೆ. ಹಂಪೆಯಲ್ಲಿ ದಾಸರು ಗಾನ ಉಪನ್ಯಾಸಗಳನ್ನು ಮಾಡುತ್ತಿದ್ದ ಸ್ಥಳವನ್ನು ಪುರಂದರ ಮಂಟಪ ಎಂದು ಕರೆಯುತ್ತಾರೆ. ಕನ್ನಡ, ಸಂಸ್ಕೃತ, ಮಹಾರಾಷ್ಟ್ರ ಭಾಷೆಗಳಲ್ಲಿ ಇವರ ಕೀರ್ತನೆಗಳು ದೊರಕಿವೆ.

ಪಲ್ಲವಿ, ಅನುಪಲ್ಲವಿ, ಚರಣ, ಭಾಗಗಳಲ್ಲಿ ಮೊದಲು ಕೃತಿ ರಚಿಸಿದವರು ದಾಸರು. ಇವರ ನಂತರ ತ್ಯಾಗರಾಜರು ಈ ಪದ್ಧತಿಯನ್ನು ಇನ್ನೂ ಹೆಚ್ಚು ಅಭಿವೃದ್ಧಿ ಪಡಿಸಿದರು, ದಾಸರ ಕಾಲದ ಹಿಂದೆ ಸಂಗೀತವು ಮಹಾರಾಜರು, ಧನಿಕರ, ಸ್ವತಾಗಿತ್ತು. ಆದರೆ ದಾಸರು ಸಾಧಾರಣ ಪ್ರಜೆಗಳಿಗೂ ದೊರಕುವಂತೆ, ಸಾರ್ವತ್ರಿಕವಾಗಿ ಗಾನ ಮಾಡುತ್ತಿದ್ದರು, ಬೋಧಿಸುತ್ತಿದ್ದರು.

ಕೋಟೀಶ್ವರರಾದ ವರದಪ್ಪ ನಾಯಕ ದಂಪತಿಗಳಿಗೆ ನಾರದಾಂಶ ಸಂಭೂತನಾಗಿ ಜನಸಿ ಸಂಸ್ಕೃತ ಕನ್ನಡ ಭಾಷೆಗಳಲ್ಲಿಯೂ, ವೇದಪುರಾಣ, ಇತಿಹಾಸಗಳಲ್ಲಿಯೂ ಅಪರಿಮಿತ ಪಾಂಡಿತ್ಯವನ್ನು ಹೊಂದಿ, ಒಂಬತ್ತು ಕೋಟಿ ಬಂಗಾರದ ನಾಣ್ಯಗಳ ಅಂದರೆ ನವಕೋಟಿ ನಾರಾಯಣನಾಗಿ, ಜಿಪುಣಾಗ್ರೇಸರ ಚಕ್ರವರ್ತಿ ಎನಿಸಿಕೊಂಡು ಯಾವುದೋ ಒಂದು ಅಪೂರ್ವ ಘಟನೆಯಿಂದ ಒಂದೇ ಕ್ಷಣದಲ್ಲಿ ವೈರಾಗ್ಯ ಭಾವವನ್ನು ಹೊಂದಿ, ತನ್ನಲ್ಲಿದ ಐಶ್ವರ್ಯವನ್ನು ಸಮೂಲವಾಗಿ, ಬಡವರಿಗೆ ದಾನ ಮಾಡಿ ಹರಿಭಕ್ತನಾಗಿ ಹಂಪೆ ನಗರಕ್ಕೆ ಬಂದು, ವ್ಯಾಸರಾಯರ ಶಿಷ್ಯನಾಗಿ ನಾರಾಯಣಾಕ್ಷರೀ ಮಂತ್ರವನ್ನು ಉಪದೇಶಿಸಿಕೊಂಡು, ಕೇವಲ ಉಂಛ ವೃತ್ತಿಯಿಂದಲೇ ಜೀವನವನ್ನು ಕಳೆಯುತ್ತ ಮಹಿಮಾನ್ವಿತರಾಗಿ ಪ್ರಸ್ತುತ ಕರ್ನಾಟಕ ಸಂಗೀತವೆಂದು ಕರೆಯಲ್ಪಡುತ್ತಿರುವ ಶುದ್ಧ ಭಾರತೀಯ ಸಂಗೀತವನ್ನು ಉದ್ಧಾರ ಮಾಡಿ 475000 ದಷ್ಟು ವಿವಿಧ ಕೃತಿಗಳನ್ನು ರಚಿಸಿ, ಈ ಮೂಲಕವಾಗಿ ಪ್ರಪಂಚದ ವಾಗ್ಗೇಯಕಾರರಲ್ಲಿ ಪ್ರಥಮ ಸ್ಥಾನವನ್ನಲಂಕರಿಸಿ ಸಂಗೀತ ಕಲಾಭಿವೃದ್ಧಿಗೆ ತಕ್ಕ ಬುನಾದಿಯನ್ನು ಹಾಕಿ ಸಂಗೀತ ಪಿತಾಮಹಾ, ಆದಿ ಗುರು ಎಂದೆನಿಸಿಕೊಂಡ ಸದ್ಗುರು ಶ್ರೀ ಪುರಂದರದಾಸರು ರಕ್ತಾಕ್ಷಿ ಸಂವತ್ಸರ ಪುಷ್ಯ ಬಹುಳ ಅಮಾವಾಸ್ಯೆ ಮಂಗಳವಾರ ಅಂದರೆ 1564 ನೇ ಸಂವತ್ಸರದ ಜನವರಿ ಎರಡನೇ ತಾರೀಖು ಸ್ವರ್ಗಸ್ಥರಾದರು.

ಸಂಗೀತದಲ್ಲಿ ವಾಗ್ಗೇಯಕಾರರ ಜೀವನ ಚರಿತ್ರೆಯನ್ನು ಪರೀಶೀಲಿಸಿದಲ್ಲಿ ಇದುವರೆವಿಗೂ ಸಹಜವಾಗಿ ಐಶ್ವರ್ಯವನ್ನೆಲ್ಲ ದಾನ ಮಾಡಿ ಹರಿ ಭಕ್ತನಾಗಿ ಸಂಸಾರದಲ್ಲಿದ್ದುಕೊಂಡು ಪುರಂದರ ದಾಸರಂತೆ ಸೇವೆ ಮಾಡಿದವರು ಕೆಲವರೇ ಎಂದು ಹೇಳಬಹುದು.

**ಕೃಪೆ: ಕೋಲಾರವಾಣಿ**



ತೆಲುಗು ಸಾಹಿತ್ಯದ ನಂದನವನದಲ್ಲಿ 'ಪದ'ಕ್ಕೆ ಹೂವಿನ ಹಾದಿಯನ್ನು ನಿರ್ಮಿಸಿದ ಘನತೆ ತಾಳ್ಳಪಾಕ ಅನ್ನಮಯ್ಯನದು. ಆತ ತೆಲುಗು ಸಾಹಿತ್ಯದಲ್ಲಿ ಮೊದಲ ವಾಗ್ಗೇಯಕಾರ ಎಂಬ ಹೆಸರು ಪಡೆಯತಕ್ಕವನಾಗಿದ್ದಾನೆ. ಆತನ ಜೀವನ ಯಾತ್ರೆ (ಕ್ರಿ. ಶ. 1408 ರಿಂದ 1503) ಹಾಡಿನಿಂದ ಆರಂಭವಾಗಿ ಹಾಡಿನಿಂದಲೇ ಅಂತ್ಯವಾಯಿತು. ಆ ದಿನಗಳಲ್ಲಿ ಆತ ಹಾಡಿದ್ದು ಪದಗಳೆಂದೂ ಸಂಕೀರ್ತನಗಳೆಂದೂ ಪ್ರಸಿದ್ಧವಾದವು. 'ಸಂಕೀರ್ತನಾಚಾರ್ಯ', 'ಪದಕವಿತಾಮಹ' ಎಂಬ ಬಿರುದುಗಳನ್ನು ನೀಡಿ ಅಂದಿನ ಸಾಹಿತ್ಯಲೋಕ ಆತನನ್ನು ಗೌರವಿಸಿತು. ಅನ್ನಮಯ್ಯ ಬರೆದದ್ದು ಮೂವತ್ತೆರಡು ಸಾವಿರ ಹಾಡುಗಳೆಂದು ಪ್ರಸಿದ್ಧಿ. ನಮ್ಮ ದುರದೃಷ್ಟದಿಂದಾಗಿ ತದರ್ಧವೂ ದೊರೆತಿಲ್ಲ. ದೊರೆತಿರುವುದೂ ಇನ್ನೂ ಪೂರ್ತಿ ಎಲ್ಲವೂ. ಈತನ ಹಾಡು ಶೃಂಗಾರವಿರಲಿ, ಆಧ್ಯಾತ್ಮಿಕವಿರಲಿ ಎಲ್ಲವೂ ಹರಿನಾಮ ಸಂಕೀರ್ತನೆಯೇ. ಅನ್ನಮಯ್ಯನ ಕವಿತ್ವವೆಲ್ಲ ವೈಷ್ಣವ ಆಚಾರ ಪ್ರಚಾರವೇ, ಎಲ್ಲವೂ ಆಧ್ಯಾತ್ಮಿಕ ಪ್ರಬೋಧವೇ! ಆದರೂ ಈತನ ಕವಿತೆ ಅನನ್ಯಸಾಧಾರಣವಾದ ಸಾಹಿತ್ಯಕ ವಹೌಲ್ಯಗಳನ್ನು ಒಳಗೊಂಡಿವೆಯೆಂದರೆ ಅದಕ್ಕೆ ಕಾರಣ ಈತನ ಕವಿತಾಶೈಲಿ ಎಂದು ಹೇಳಬಹುದು. ಆಡು ಭಾಷೆಯಲ್ಲಿ ಹಾಡು ಹೇಳಿದ ತೆಲುಗು ಕವಿಗಳಲ್ಲಿ ಅನ್ನಮಯ್ಯ ಅಗ್ರಗಣ್ಯ. ಈತನದು ಅಚ್ಚವಾದ ಗ್ರಾಮೀಣ ನುಡಿ, ಜಾನಪದ ವ್ಯವಹಾರ. ಅನ್ನಮಯ್ಯನ ಭಾಷೆಯನ್ನು ಕುರಿತು ವೇಟೂರಿ ಪ್ರಭಾಕರ ಶಾಸ್ತ್ರಿಯವರು ಹೀಗೆಂದಿದ್ದಾರೆ. "ಅನ್ನಮಾಚಾರ್ಯನ ಸಂಕೀರ್ತನೆಗಳ ಭಾಷೆ ಪಶ್ಚಿಮಾಂಧ್ರದೇಶದಲ್ಲಿ ಬಳಕೆಯಲ್ಲಿರುವುದು"



# ಅನ್ನಮಯ್ಯ-ಜಾನಪದ ಸಂಬಂಧ

ಯಾಗಿ ಪ್ರಕಟಗೊಂಡಿಲ್ಲ. ತಾಮ್ರಪಟಗಳಲ್ಲಿ ಲಿಖಿತವಾಗಿರುವುದನ್ನು ಪ್ರಕಟಿಸಲು ಆರು ದಶಕಗಳಿಂದ ತಿರುಮಲೆ ತಿರುಪತಿ ದೇವಸ್ಥಾನ ಮಾಡುತ್ತಿರುವ ಕೃಷಿ ಈಗೀಗ ಒಂದು ಘಟ್ಟವನ್ನು ಮುಟ್ಟುತ್ತಿದೆ.

ಅನ್ನಮಾಚಾರ್ಯ ಶ್ರೀ ವೆಂಕಟೇಶ್ವರನ ಅಂತರಂಗ ಭಕ್ತ. ಆ ಶ್ರೀನಿವಾಸನೇ ಈತನಿಗೆ ಇಹಪರ



(ಅನ್ನಮಾಚಾರ್ಯ ಚರಿತ್ರೆ - ಪೀಠಿಕೆ. ಪು: 112) "ಗ್ರಾಂಥಿಕ ಭಾಷೆಯನ್ನು ಸೊಗಸಾಗಿ ಕಲಿತವನಾಗಿದ್ದರೂ, ಈತ ಸಂಕೀರ್ತನೆಗಳಲ್ಲಿ ಅನೇಕ ಕಡೆ ಆಡುಭಾಷೆಯನ್ನೇ ಬಳಸಿದ್ದಾನೆ" (ಅದೇ ಪುಟ–105) ಆತನ ಸಂಕೀರ್ತನೆಗಳಲ್ಲಿ ಜಾನಪದ ಸೌರಭ ತುಂಬಿ ಸೂಸುತ್ತದೆ. ಆತನ ಹಾಡುಗಳಲ್ಲಿ ಹೆಜ್ಜೆ ಹೆಜ್ಜೆಗೂ ಪ್ರಕಟವಾಗುವ ಕೃಷಿಕ ಧರ್ಮವನ್ನು ಸ್ಥೂಲವಾಗಿ ಪರಿಶೀಲಿಸುವುದರಿಂದ ಈ ಮಾತನ್ನು ಪರಿಶೀಲಿಸಬಹುದು.

ಅನ್ನಮಯ್ಯ ಹುಟ್ಟಿದ್ದು ನಂದವರ ವೈದಿಕರಲ್ಲಿ. ನಾರಾಯಣಸೂರಿ, ಲಕ್ಕಮಾಂಬ ಆತನ ತಂದೆ ತಾಯಿಗಳು. ಇಂದಿನ ತಾಳ್ಳಪಾಕ ಅವರ ಸ್ವಸ್ಥಳ. ಬ್ರಾಹ್ಮಣರಾಗಿದ್ದರೂ ಅನ್ನಮಯ್ಯನ ಕುಟುಂಬ ರೈತ ಕುಟುಂಬವೆಂದೂ, ಅವರ ವೃತ್ತಿ ವ್ಯವಸಾಯವೆಂದೂ ಹೇಳಬಹುದು. ಅನ್ನಮಯ್ಯನ ಮೊಮ್ಮಗ, 'ಅಷ್ಟ ಮಹಿಷೀ ಕಲ್ಯಾಣ', 'ಪರಮಯೋಗಿ ವಿಲಾಸ' ಮೊದಲಾದ ದ್ವಿಪದ ಕಾವ್ಯಗಳ ಮೂಲಕ ಪ್ರಸಿದ್ಧನಾದ ತಾಳ್ಳಪಾಕ ಚಿನ್ನನ್ನ ಬರೆದ ಅನ್ನಮಾಚಾರ್ಯ ಚರಿತ್ರೆಯೇ ಇದಕ್ಕೆ ಸಾಕ್ಷಿ. ಅನ್ನಮಯ್ಯನ ಬಾಲ್ಯದಲ್ಲಿ ಅವನ ತಿರುಮಲೆಯ ಯಾತ್ರೆ ಒಂದು ಪ್ರಧಾನ ಘಟ್ಟ. ಈ ಯಾತ್ರೆಗೆ ಕಾರಣವಾದದ್ದು ಅವನ ಹೊಲದ ಕೆಲಸವೇ. ಒಂದೊಮ್ಮೆ ಹೊಲದಲ್ಲಿ ಹುಲ್ಲು ಕೀಳುತ್ತ ಕಿರುಬೆರಳಿಗೆ ಪೆಟ್ಟಾಗಿ ರಕ್ತ ಸುರಿಯುವುದು. ರಕ್ತ ಧಾರೆಯಾಗಿ ಸುರಿಯುತ್ತಿರುವುದರಿಂದಾದ ನೋವೊಂದು ಕಡೆ, ಆ ಗಾಯದೊಡನೆ ಮನೆಗೆ ಹೋದರೆ ಮನೆಯಲ್ಲಿ ಅತ್ತಿಗೆ ಇನ್ನೇನು ರಂಪಮಾಡುವಳೋ ಎಂಬ ಭಯ, ತಾನು ಕಿತ್ತ ಹುಲ್ಲಿನಲ್ಲಿ ಪರಮಾತ್ಮ ಇರುವನೇನೋ ಎಂಬ ಪಾಪಭೀತಿ – ಎಲ್ಲ ಸೇರಿ ಕಲಸು ಮೇಲೋಗರವಾಗಿ ಆ ಬಾಲಕನಲ್ಲಿ ವೈರಾಗ್ಯ ಉಕ್ಕುತ್ತದೆ. ಇಷ್ಟರಲ್ಲಿ ದೂರದ ರಾಜಮಾರ್ಗದಲ್ಲಿ ತಿರುಮಲೆಗೆ ಹೊರಟ ಯಾತ್ರಿಕ ವೃಂದ ಕಾಣುತ್ತದೆ. ಅಷ್ಟೆ; ಕುಡುಗೋಲು ಬಿಸುಟು ಹೊಲದಿಂದಾಚೆಗೆ ಬಂದ ಅನ್ನಮಯ್ಯ ಆ ಗುಂಪಿನಲ್ಲಿ ಕಲೆತುಹೋದ. ಈ ಘಟನೆಯನ್ನು ಚಿನ್ನನ್ನ ಹೀಗೆ ವರ್ಣಿಸಿದ್ದಾನೆ.

> ಪಶುವುಲಕು ಕಸುವುದೇಬನುಪ ಬಾಲುಂಡು
> ವೆಸನೇಗಿ ವಾಡಿ ಲವಿತ್ರಂಬು ಪೂನಿ
> ಮರಕತಾಂಕೂರ ಕೋಮಲ ಭರ್ಮರುಚುಲ
> ಗರವೊಪ್ಪು ಪಚ್ಚನಿ ಗರಿಕ ವೀಕ್ಷಿಂಚಿ
> ಪಾಪವಲ್ಲರುಲ ಶ್ರೀಪತಿ ನಾಮ ಹೇತಿ
> ವೇಪಾರದರುಗು ಯೋಗೀಂದ್ರುಚಂದ್ರಮುನ

ಅನುವಾದ :

**ಶ್ರೀಮತಿ ಎಸ್. ವಿ. ಹೇಮಾವತಿ,**
ಎಂ.ಎ.

ಕಸಿ ಮಸ ನೊಕಪಿಡಿಕೆಡುಗೋಸಿ ಮರಿಯು
ಗಸುವು ಗೋಯಗ ಬೋಯಿ ಕಡವ್ರೇಲು
ಸೋಕಿ

ವಡಿಯು ನೆತ್ತುರು ಸೂಚಿ ವಾಕ್ರುಚ್ಚಿ ಶೌರಿ
ಯಡುಗುಲು ದಲಚಿ ಶ್ರೀ ಹರಿ ಹರಿಯನುಚು

ನೀ ಕೋತ ಕೊಲದಿ ನಾದೆರಗಿನ ವದಿನೆ
ಚೇ ಕೋತ ಪಡಗಾದು ಚೇ ರೋತಯನುಚು

ಹರಿ ಚರಾಚರ ದೇಹಿಯನಿ ಪೆದ್ದಲನಗ
ನಿರವೊಂದನೆರಿಗಿಯುನಿಟು ಸೇಯದಗುನೇ
ಚಿಡಿಮುಡಿನೇಮಿ ಚೇಸೆದನುಚು ಚೇತಿ
ಕೊಡವಲಿ ನೇಲಗ್ರಕ್ಕುನ ಬಾರವೈಚೆ

( ಅನ್ನಮಯ್ಯ ಚರಿತ್ರಮು )

ಅಂದು ಹಾಗೆ ಕುಡುಗೋಲು ಬಿಸುಟು ಬಂದ ಅನ್ನಮಯ್ಯನಿಗೆ ಮತ್ತೆ ಜೀವನದಲ್ಲಿ ಕುಡುಗೋಲು ಹಿಡಿಯುವ ಆಗತ್ಯ ಉಂಟಾಗಲಿಲ್ಲ. ಅನ್ನಮಯ್ಯನ ಬೇಸಾಯ ಅಲ್ಲಿಗೇ ಮುಗಿಯಿತು. ತಿರುಮಲೆಯ ಮೆಟ್ಟಿಲು ಹತ್ತುತ್ತಲೇ ಆತ ಬಾಲ ಕವಿಯಾದ. ಬೆಟ್ಟಕ್ಕೆ ಹತ್ತುವ ಮಾರ್ಗಾಯಾಸ ದಲ್ಲಿಯೇ ಆಶುಕವಿಯಂತೆ ಅಲಮೇಲುಮಂಗಾ ಶತಕವನ್ನು ನುಡಿದ. ಬೆಟ್ಟದ ಮೇಲೆ ವೆಂಕಟೇಶ್ವರನ ಸನ್ನಿಧಿಯಲ್ಲಿ ವೆಂಕಟೇಶ್ವರ ಶತಕವನ್ನು ನಿವೇದಿಸಿದ. ಹೀಗೆ ತಿರುಮಲೆಯಲ್ಲಿ ಅನ್ನಮಯ್ಯನಿಗೆ ಸ್ವಾಮಿಯ ದರ್ಶನದೊಂದಿಗೆ ಸರಸ್ವತೀ ಸಾಕ್ಷಾತ್ಕಾರ ಸಹ ಆಯಿತು. ಇದರಿಂದ ಆತನ ಜೀವನ ಊಹಿಸದಂತಹ ತಿರುವು ಪಡೆಯಿತು. ಅನಂತರದಲ್ಲಿ ' ತುಂಬುರನೋ ನಾರದನೋ ಅಥವಾ ಈ ವಿಧದೊಳು ತಿರುಗುವ ದೇವತೆಯೋ ಅಥವಾ ಮಾನವನೋ ಈ ಅನ್ನಮಯ್ಯ 'ನೆಂದು ಸರ್ವಜನರೂ ಕೊಂಡಾಡಿ ಸಂತಸ ಪಡುವ ಹಾಗೆ ಅನ್ನಮಯ್ಯನ ಕೀರ್ತಿ ಹರಡಿತು. ಸಾಳ್ವ ನರಸಿಂಹರಾಯನ ಅಂತರಂಗ ಮಿತ್ರನಾಗಿ ಆ ರಾಜನ ಆಸ್ಥಾನದಲ್ಲಿ ತನ್ನ ಪದಕವಿತೆಗಳಿಂದಾಗಿ ಅಂದಿನ ಸಂಕೀರ್ತನಾಭಿಮಾನಿಗಳ ಶ್ಲಾಘನೆಗೆ ಪಕ್ಕಾದನು. ನರಸಿಂಗರಾಯನಿಗೆ ಅನ್ನಮಯ್ಯನ ಮಾತೆಂದರೆ ವೇದವಾಕ್ಕು. ಈತನ ಹಾಡು ಅವನಿಗೆ ಪ್ರಾಣ. ರಾಜಧಾನಿಯಲ್ಲಿದ್ದರೂ ಸಿರಿ ಸಂಪತ್ತುಗಳಲ್ಲಿ ಮುಳುಗಿ ತೇಲಿದರೂ, ಅನ್ನಮಯ್ಯನ ಹಾಡುಗಳಲ್ಲಿ ರಾಜವೈಭವದ ಗಂಧವಾಗಲೀ, ನಾಗರಿಕತೆಯ ಕೃತ್ರಿಮ ಸಂಸ್ಕಾರವಾಗಲೀ ಉದಾಹರಣೆಗೂ ಸಿಗದಿರುವುದು ಗಮನಾರ್ಹ. ಆತ ಎಲ್ಲಿದ್ದರೂ ಕಣ್ಣ ಮುಂದೆ ಗ್ರಾಮ ಜೀವನವೂ, ಹೊಲ ಬೆಳೆಗಳೂ ಸದಾ ಕದಲಾಡುತ್ತಿದ್ದವೆಂದು ತೋರುತ್ತದೆ. ಎಂತಲೇ ವೇದಾಂತ ಪರಮಾರ್ಥವನ್ನು ವಿವರಿಸಲು ಆತ ಯಾವ ಸಾದೃಶ್ಯವನ್ನು ತೆಗೆದುಕೊಂಡರೂ ಅದು ಗ್ರಾಮ ಜೀವನಕ್ಕೆ ಸಂಬಂಧಿಸಿದ್ದೇ ಆಗಿರುತ್ತದೆ. ಎಂತಹ ಅಲೌಕಿಕ ಆಧ್ಯಾತ್ಮಿಕ ವಿಷಯವೇ ಆದರೂ ನಿತ್ಯಜೀವನದ ಲೌಕಿಕ ಸತ್ಯಗಳಿಗೆ ವಿಶೇಷವಾಗಿ ರೈತರ ಬದುಕಿಗೆ ಅನ್ವಯಿಸಿ ಸಾದೃಶಗೊಳಿಸಿ ಹೇಳುವುದು ಆತನಿಗೆ ಅಭ್ಯಾಸ. ಉದಾಹರಣೆಯಾಗಿ ಈ ಹಾಡನ್ನು ನೋಡಿ.



ತಿಮ್ಮರೆಡ್ಡಿ ಮಾಕುನಿಚ್ಚೆ ದಿಷ್ಟಮೈನ ಪೊಲಮು
ಬೊಮ್ಮರೆಡ್ಡಿ ಕಪ್ಪಗಿಂಚಿ ಪೋದಿಚೇಸೆ ಪೊಲಮು
ನಿಂಡಿನಟ್ಟಿ ಮಡುಗುಲ ನೀರುವಂಕ ಪೊಲಮು
ಕೊಂಡಲು ಮೋಚಿನ ಪೆದ್ದಗೊಬ್ಬರಪು
ಪೊಲಮು

ಅಂಡನೇ ಪೊಲಮು ರಾಜುಲುಂಡೇಟಿ
ಪೊಲಮು

ಚೆಂಡಿವೇಸಿ ಮಾಕುಲೆಲ್ಲಾ ನೆಲಗಿನ ಪೊಲಮು
ಆಸಪಡಿ ವರದಾನ ಮಡಿಗಿನ ಪೊಲಮು
ಬಾಸಲತೋ ಗಡುನೆತ್ತು ಪಟ್ಟಮೈನ
ಪೊಲಮು

ರಾಸಿಕೆಕ್ಕೇ ಮುನುಲುಕು ರಚ್ಚೈನ ಪೊಲಮು
ವೇಸರಕ ನಾಗೇಟಿ ವೇಗಿಲೈನ ಪೊಲಮು
ಮಂಚಿ ಗುರುತ್ತೈನ ರಾವಿಮಾನಿಚೇನಿ
ಪೊಲಮು

ವಂಚಿನ ಗುರ್ರಮು ದೋಲೇ ವಯ್ಯಾಳಿ
ಪೊಲಮು

ಯೆಂಚಗ ಶ್ರೀ ವೆಂಕಟೇಶು ನಿರವೈನ
ಪೊಲಮು

ಪಂಚುಕೋನಿ ಲೋಕುಲೆಲ್ಲ ಬ್ರತಿಕೇಟಿ
ಪೊಲಮು

(ಆಧ್ಯಾತ್ಮ ಸಂಕೀರ್ತನೆ 10 ಸಂ. 52 ಹಾಡು)

ಮೇಲು ನೋಟಕ್ಕೆ ಈ ಹಾಡಿನಲ್ಲಿ ಒಂದು ಉತ್ಕೃಷ್ಟವಾದ ಹೊಲ ಮಾತ್ರವೇ ಕಂಡು ಬರುತ್ತದೆ. ಆಳಕ್ಕೆ ಇಳಿದು ಅರ್ಥವನ್ನು ಬೆದಕಿದಾಗ ದಶಾವತಾರಗಳು ಪ್ರತ್ಯಕ್ಷವಾಗುತ್ತವೆ. ' ನಿಂಡಿನಟ್ಟಿ ಮಡುಗುಲ ನೀರುವಂಕ ಪೊಲಮು ' ಎನ್ನುವಲ್ಲಿ ಮತ್ಸ್ಯಾವತಾರ, ' ಕೊಂಡಲು ಮೋಚಿನ ಪೆದ್ದಗೊಬ್ಬರಪು ಪೊಲಮು ' ಎನ್ನುವಲ್ಲಿ ಕೂರ್ಮಾವತಾರ – ಹೀಗೆ ಒಂದೊಂದು ಪಾದದಲ್ಲಿ ಒಂದೊಂದು ಅವತಾರ ಧ್ವನಿಸುತ್ತದೆ. ತಿರುಮಲೇಶನನ್ನು ತಿಮ್ಮರೆಡ್ಡಿ ಎಂದೂ, ಬ್ರಹ್ಮನನ್ನು ಬೊಮ್ಮರೆಡ್ಡಿ ಎಂದೂ ಕರೆದಿರುವುದು ಅನ್ನಮಯ್ಯನಿಗೇ ಸಲ್ಲುವ ಕಲ್ಪನೆ. ಹೀಗೆ ಹೊಲದಿಂದ ಆರಂಭವಾದ ಅನ್ನಮಯ್ಯನ ಕಾವ್ಯಾರಂಬದಲ್ಲಿ ಸಮಸ್ತ ವ್ಯವಸಾಯ ರಂಗವೂ ಸಾಕ್ಷಾತ್ಕರಿಸುತ್ತದೆ. ರೈತರ ಮಿತ್ರರಾದ ಚತುಷ್ಪಾದಿಗಳು ಎಂದರೆ ಅನ್ನಮಯ್ಯನಿಗೆ ಅಮಿತ ಪ್ರೀತಿ. ಆ ಪ್ರೀತಿ ಎಲ್ಲಿಯವರೆವಿಗೆ ಹೊರಟಿದೆಯೆಂದರೆ ಒಂದು ಕವನದಲ್ಲಿ ಆತ ತನ್ನನ್ನೇ ಒಂದು ಪಶುವಿನಂತೆ ವರ್ಣಿಸಿಕೊಂಡಿದ್ದಾನೆ.

ಪಸಿಮಿಬಾಪಮನೇಟಿ ಬಂಡೆಲು ಮೇಸಿತಿನಿ
ಕಸರಿ ದೇಹಪು ಕಟ್ಟುಗಾಡಿನುಂಟೆನಿ
ಕೊಸರಿ ಕರ್ಮಪು ಮೆಡಗುದಿಯ ಮೋಚಿತಿನಿ
ಪಸರಮುವಂಟಿವಾಡ ಬಾಲಿಂಚವೇ ?

ಅ. ಸಂ. (10-227)

ತಾನೊಂದು ಪಶುವೆಂದೂ ತನ್ನ ತಾನು ದೈವದ ಮುಂದೆ ದೂಷಿಸಿಕೊಳ್ಳುತ್ತಿದ್ದಾನೆ ಅನ್ನಮಯ್ಯ. ಪಾಪವೆನ್ನುವ ಕಳ್ಳಮೇವನ್ನು ತಿಂದು ದೇಹ ವೆನ್ನುವ ಗೂಟಕ್ಕೆ ಕಟ್ಟಲ್ಪಟ್ಟಿದ್ದಾನೆ. ಇದೂ ಸಾಲದೆ ಕರ್ಮಫಲದ ನೊಗವನ್ನು ಹೊತ್ತಿದ್ದಾನೆ. ತೊಂಡು ತಿನ್ನುವ ದನಗಳನ್ನು ತೊಂಡವಾಡಿಯಲ್ಲಿ ಹಾಕುವುದು, ಗೂಟಕ್ಕೆ ಕಟ್ಟಿಹಾಕುವುದು, ಅವು ಗಳಿಗೆ ನೊಗವೇರಿಸುವುದು – ಇವುಗಳೆಲ್ಲ ರೈತರು ಹಳ್ಳಿಗಳಲ್ಲಿ ತುಡುಗುದನಗಳಿಗೆ ವಿಧಿಸುವ ಶಿಕ್ಷೆ ಗಳು. ತೊಂಡವಾಡಿಯ ಪ್ರಸ್ತಾವನೆ ಅಲ್ಲಲ್ಲಿ ಅನ್ನ ಮಯ್ಯ ಮಾಡುತ್ತಾನೆ.

ಭೂಮೆಲ್ಲಾ ಮೇಸಿನಾ ನಾ ಬೊತಕು
ಬಂಡೆಲೇದು
ನೇಮವು ಬ್ರಹನ್ನುನಿಕಿ ನಿಂದಲೇದು
(ಅ.ಸಂ. 6–29–ಹಾಡು)
ಸರಸ ಶ್ರೀವೇಂಕಟೇಶು ಶರಣಾಗತುಲಕುನು
ಪರಗ ಮಾಯಲದೊಡ್ಡಿ ಬಂದೆಮೂನ್ನಯನು
(ಅ.ಸಂ. 7–217)

ಅನ್ನಮಯ್ಯ ಸಂಸಾರಿ, ಮುಕ್ತಿ ಬೇಕೆಂದರೆ ಕಾಡಿಗೆ ಹೋಗಿ ಮೂಗು ಮುಚ್ಚಿಕೊಂಡು ತಪಸ್ಸು ಮಾಡುವುದು ಅನ್ನಮಯ್ಯನ ಅಭಿಮತ ವಲ್ಲ. ಹರಿನಾಮ ಸ್ಮರಣೆಯಿಂದ ಸಂಸಾರ ಸಾಗ ರವನ್ನುತ್ತರಿಸಬಹುದೆಂಬುದು ಆತನ ಅಭಿಪ್ರಾಯ. ಈ ವಿಷಯವನ್ನು ಹೇಳ ಬೇಕೆಂದಾಗಲೂ ಆತ ಪ್ರಾಣಿ ಸಾದೃಶವನ್ನೇ ತಂದಿದ್ದಾನೆ.

ಬಂತಿಗೊಟ್ಟೆ ನುರಿಪೇಟ ಪಸುರವುಲೆಡನೆಡ
ಬೊಂತನೊಕ್ಕೊಕ್ಕ ಗವುಕವುಚ್ಚುಕೊನ್ನಟ್ಲು
ಚೆಂತಲ ಸಂಸಾರಮು ಸೇಯು
ನರುಡಂದುಲೋನೆ
ಕೊಂತಗೊಂತ ಹರಿನಾತ್ಮಗೊಲುಚುಟಿಚಾಲು
(ಅ.ಸಂ. 10–^01)

ಇದು ಕಾಳು ಕಡ್ಡಿಯನ್ನು ತುಳಿಯುವ ದೃಶ್ಯ. ಕುಯ್ಲಿನ ಕಾಲದಲ್ಲಿ ಯಾವ ಹೊಲದಲ್ಲಿಯಾದರೂ ಯಾವ ಊರಿನಲ್ಲಾದರೂ ಎಲ್ಲೋ ಒಂದು ಕಡೆ ಕಂಡು ಬರುವ ಕೃಷಿಗೆ ಸಂಬಂಧ ಪಟ್ಟ ಸನ್ನಿವೇಶ ಇದು. ಎತ್ತುಗಳನ್ನು ಮಂದೆಯಾಗಿ ಕಟ್ಟಿ ಅವು ಗಳಿಂದ ಹರಡಿದ ಕಾಳು ಕಸವನ್ನು ತುಳಿಸು ತ್ತಾರೆ. ಇದು ಕಸ ಕಾಳುಗಳನ್ನು ಬೇರ್ಪಡಿಸುವ ಪುರಾತನ ವಿಧಾನ. ಬೆಳೆಯನ್ನು ತುಳಿಯುತ್ತ ಹೊರಟ ಎತ್ತುಗಳು ಹುಲ್ಲು ತಿನ್ನದಿರುವಂತೆ ರೈತ ಹಿಂದೆಯೇ ಚಾಟಿಯಿಂದ ಹೊಡೆಯುತ್ತ ಎಚ್ಚ ರಿಸುತ್ತಾನೆ. ಆದರೂ ರೈತ ಎಚ್ಚರ ತಪ್ಪಿದಾಗ ಆತುರದಿಂದ ಹುಲ್ಲನ್ನು ಬಾಯಿತುಂಬಾ ತುಂಬಿ ಕೊಂಡು ಪಶು ಮುಂದುವರಿಯುತ್ತದೆ. ಇದನ್ನು ಅನ್ನಮಯ್ಯ ಎಷ್ಟೋಬಾರಿ ನೋಡಿರಬೇಕು. ಎಂತಲೇ ಸಂಸಾರ ಒಂದು ಕಸ ತುಂಬಿದ ಬೆಳೆ ಯೆಂದೂ, ಸಂಸಾರಿ ಅದನ್ನು ವಿಂಗಡಿಸುವ ಪಶು ವೆಂದೂ, ಆಗಾಗ ತಿಂದು ಮೆಲುಕು ಹಾಕುವ ಹುಲ್ಲು ಹರಿನಾಮವೆಂದೂ ಹೇಳಲು ಬಲ್ಲವನಾದ. ಅನ್ನಮಯ್ಯ ಪಶುಗಳಿಗೆ ಸಂಬಂಧಿಸಿದ ಅನೇಕ ಗಾದೆಗಳನ್ನು ತನ್ನ ಕವಿತೆಯಲ್ಲಿ ಜೋಡಿಸಿದ್ದಾನೆ. ಉದಾಹರಣೆಗೆ ಒಂದೆರಡು ಎಂದರೆ;

ಆಕಡ ನಾವುಗೊಂಟಿ ನಾವು
ವೆಂಟದೂಡಯನು
ಜೋಕಲಗೊನ್ನಟ್ಟವಾರಿ ಸೊಮ್ಮೆಕಾದಾ
(7-207)

(ಹಸುವನ್ನು ಕೊಂಡಲ್ಲಿ ಹಸುವಿನೊಂದಿಗೆ ಕರುವೂ ಕೊಂಡವರದೇ ಅಲ್ಲವೇ)

ಬೂಟಕ ಮುಲನೆಲ್ಲ ಬೊರಲಿ ಸಂಸಾರಂಬು
ಪಾಟುದೆಚ್ಚಿನ ಯೀಬ್ರದುಕು
ನೀಟುಗನೆದ್ದುದನ್ನೀನನಿ ಗುರ್ರಮು
ಚಾಟುಕೇಗಿನಯಟ್ಟೆ ಚಂದವಮಾಯೆ

(ಎತ್ತು ಒದೆಯುವುದೆಂದು ಕುದುರೆಯ ಬದಿಗೆ ಹೋದಂತೆ ಈ ಸಂಸಾರ)
(11–3–74)

ಕೊಲ್ಲಯೆದ್ದುಲೆಪ್ಪಟಿನೇ ಗೋನೆಲೆ
ಕೊತ್ತಲೈನಟ್ಲು
ಚಲ್ಲನಿ ನೇನೊಕಡನೇ ಜನ್ಮಮುಲೇ ಮೇರು
(7–284)

(ಹಳೇ ಎತ್ತು ಹೊಸ ಬಟ್ಟೆ, ಹಳೆಯ ಆತ್ಮ ಹೊಸಜನ್ಮ)

ಆ ಪಗನೆದ್ದೇ ಮೆರುಗುನಟುಕುಲ ಚವಿಮಾಟ
ಮೋಪರಿವಿ ನೀಕು ನಾ ಮುದಮು ಮುದ್ದಾ
(11–3–21)

(ಅವಲಕ್ಕಿಯ ರುಚಿ ಎತ್ತು ಬಲ್ಲುದೇ)

ಎನು ಪೋತುತೋನೆದ್ದು ನೇರು ಗಟ್ಟೆನಯಟ್ಲು
ಯೆನಿಸಿ ಮುಂದರ ಸಾಗದೇಂಟೆ ಬ್ರದುಕು
(5–98)

(ಎತ್ತು ಏರಿಗೆ ಕೋಣ ನೀರಿಗೆ ಎಳೆದಂತೆ ಬದುಕು ಸಾಗದು)

ಗುಗ್ಗಿಳ್ಳವೆಲಯಟ್ಟೆ ಕೊನಿನ ಗುರ್ರಮುಲೆಲ್ಲ
ದಗ್ಗರಿಯಗಡುತುಲು ದಾಟ ಬೋಯೀನ

(ಗುಗ್ಗರಿಯಿಂದ ಕೊಂಡ ಎತ್ತು ಕಾಲುವೆಯನ್ನು ದಾಟಲಾರದಂತೆ)

ಯೇವಲ ನರುಡು ಲೇಕ ಎದ್ದೇ ತಾ
ದುನ್ನೇನಾ
ನೀವು ಸೇಯಿಂಚಕ ವೇರೆ ನೇ ಪುಣ್ಯಮು
ಸೇಸೇನಾ (6–130)

( ಮನುಷ್ಯನಿಲ್ಲದೆ ಎತ್ತು ಉಳುವುದಿಲ್ಲ. ನೀನು ಮಾಡಿಸದೆ ನಾನು ಪುಣ್ಯ ಮಾಡುವೆನೇ ! )

ಹೀಗೆ ತನ್ನ ಕಾಲದಲ್ಲಿ ಗ್ರಾಮೀಣರಲ್ಲಿ ಪ್ರಚ ಲಿತವಿದ್ದ ಗಾದೆಗಳು, ಮಾತುಗಳನ್ನು ಹಾಗೆಯೇ ಸ್ವೀಕರಿಸಿ ತನ್ನ ಕವಿತೆಯಲ್ಲಿ ಬಳಸಿ ಕೊಂಡಿದ್ದಾನೆ.

ಅನ್ನಮಯ್ಯ ಹೇಳಿದ ಗಾದೆಗಳೆಲ್ಲ ಇಂದಿಗೂ ನೆಲ್ಲೂರು ಹಾಗೂ ಇತರ ರಾಯಲಸೀಮೆಯ ಜಿಲ್ಲೆಗಳಲ್ಲಿ, ಹಳ್ಳಿಗರಲ್ಲಿ ಪ್ರಚಾರದಲ್ಲಿರುವುದು ವ್ಯಾವಹಾರಿಕ ಭಾಷಾ ಪ್ರಿಯರಿಗೆ ಪರಮಾನಂದ ಉಂಟಾಗಿಸುವ ವಿಷಯ. ಕೃಷಿಗೆ ಸಂಬಂಧಿಸಿದ್ದೇ ಆದ ಅನ್ನಮಯ್ಯ ಬಳಸಿದ ಇನ್ನೂ ಹಲವು ಉದಾಹರಣೆಗಳನ್ನು ಪರಿಶೀಲಿಸುವ.

ಪೊನಗಿ ಯಂಪಲಿ ಚೆಟ್ಟು ಪೂಚೇನೇಮಿ
ಕಾಚೇನೇಮಿ




ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು
ಶ್ರೀ ವೆಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

ನನುಚನಿ ಪತಿ ಎಂತ ನವ್ವಿನಾನೇಮಿ
(15–66)

ಎಂಪಲಿಗಿಡ ಹೂಬಿಟ್ಟರೇನು, ಕಾಯಿಬಿಟ್ಟರೇನು ಎಂಬುದು ರೈತರ ಅಭಿಪ್ರಾಯ. ಅದು ಒಂದು ಗೊಬ್ಬರದ ಗಿಡ. ಚೆನ್ನಾಗಿ ಬೆಳೆದನಂತರ ಹೊಲದಲ್ಲಿ ಅದು ಹರಡುವಂತೆ ಉಳುವುದು. 'ಎಂಪಲಿ ಚೆಟ್ಟು ದೊಡ್ಲೋನೆ ವಾಡು' (ಎಂಪಲಿ ಗಿಡವನ್ನು ದೊಡ್ಡಿಯಲ್ಲಿ ಬಳಸು–ಗೊಬ್ಬರಕ್ಕೆ) ಎಂಬುದು ನೆಲ್ಲೂರು ಕಡಪಜಿಲ್ಲೆಗಳಲ್ಲಿ ಸರ್ವಸಾಧಾರಣ ಗಾದೆ.

ಪರಿಗಲೇರೇಟಿವಾನಿ ಪಟ್ಟುವು ರಾಜುಗಾ
ನಿರತ ಭೋಗವುಲಿಚ್ಚಿ ನಿಲಿಪಿನಟ್ಲು
(15–185)

ಗೆಡ್ಡೆ ಆಯುವುದೆಂಬುದು ಹಳ್ಳಿಗಳಲ್ಲಿ ಬಡತನಕ್ಕೆ ಸಂಕೇತ ಆಯ್ದುಕೊಂಡು ತಿಂಬುವವನು ಅರಸನಾದನೆಂಬುವುದು ಅಪ್ಪಟ ಜಾನಪದೀಯ ಗಾದೆ.

ವೊಲ್ಲಮಿ ಗಾಲಿಯೊಕಟೇ ಮುಂಚಿ
ತೂರುಪೆತ್ತು ಚೋಟ
ಪೊಲ್ಲ ಕಟ್ಟು ಕಡಬಡೆ ಪೋಗುವಡೇ ಗಟ್ಟವೆಲ್ಲಾ
ವುಲ್ಲವುಲೋ ಶ್ರೀಹರಿ ಒಕಡ್ಡೆ ಉಂಡುನತನಿ
ನೊಲ್ಲನ್ನೈರಿ ಯಸುರುಲು ವೊಲಿಸಿರಿ ಸುರಲು
(10–267)

ತೂರಿಕೊಳ್ಳುವುದು ಒಂದು ಪ್ರಮುಖವಾದ ಕೃಷಿ ಪ್ರಕ್ರಿಯೆ. ಧ್ಯಾನದಲ್ಲಿ ಕಾಳು ಜಳ್ಳುಗಳೆರಡೂ ತೂರುವರೆಗೂ ಒಟ್ಟಿಗೇ ಇರುತ್ತವೆ. ಧಾನ್ಯರಾಶಿಯನ್ನು ಮೊರದಲ್ಲಿ ತುಂಬಿ ತೂರಿದಾಗ ಗಾಳಿಯಲ್ಲಿ ಜಳ್ಳು ದೂರವಾಗಿಯೂ ಕಾಳು ನೇರವಾಗಿ ಹತ್ತಿರದಲ್ಲೂ ಬೀಳುತ್ತವೆ. ತೂರುಗಾಳಿಗೆ ಜಳ್ಳಿನ ಬಗ್ಗೆ ಕೋಪವಾಗಲೀ ಕಾಳಿನ ಬಗ್ಗೆ ಪ್ರೇಮವಾಗಲೀ ಇಲ್ಲ. ಅದೇ ರೀತಿಯಲ್ಲಿ ಶ್ರೀಹರಿಗೆ ಎಲ್ಲರೂ ಸಮಾನರೇ ಎನ್ನುತ್ತಿದ್ದಾನೆ ಅನ್ನಮಯ್ಯ. ರಾಕ್ಷಸರು ಹರಿಗೆ ದೂರವಾದರೆಂದರೆ ಅವರ ತಪ್ಪು. ದೇವತೆಗಳು ಹತ್ತಿರವಾದರೆ ಅದು ಅವರ ಅಪೇಕ್ಷೆ ಮಾತ್ರವೇ. ಹೀಗೆ ಸುರಾಸುರರಿಗೆ ಹರಿಯೊಂದಿಗಿರುವ ಸಂಬಂಧವನ್ನು ಅನ್ನಮಯ್ಯ ಈ ರೀತಿಯನ್ನು ತಿಳಿಸಿದನೆಂದರೆ ಕಾರಣ ಆತನಿಗೆ ರೈತ ಜೀವನದಲ್ಲಿರುವ ಪಕ್ಷಪಾತವೇ ಎನ್ನಬಹುದು.

ತೂರಿದ ಧ್ಯಾನವನ್ನು ಜರಡಿ ಹಿಡಿಯುವುದು ಕೃಷಿಯಲ್ಲಿನ ಅಂತಿಮ ಹಂತ. ಅನ್ನಮಯ್ಯ ಈ ಹಂತವನ್ನೂ ಬಿಟ್ಟಿಲ್ಲ. ಮೇಲಿನ ಹಾಡಿನ ಕೊನೆಯ ಚರಣದಲ್ಲಿ ;

ಮಿಂಚಿನ ಜಲ್ಲಿಯೊಕಟಿ ಮೀದನುಂಡು
ದೊಡ್ಡವೆಲ್ಲ
ಚಂಚುಲ ಸನ್ನಮುಲೆಲ್ಲಾ ಸಂದುಲಗಾರು
ಯೆಂಚಗ ಹರಿಯೊಕಡೆ ಯೆರಗಕ್ಕೊಂದರೈತೆ
ಕೊಂಚವ್ಯೆ ರೀತಿನಿಗೊಲ್ಚಿ ಕೊಂದರೈತೆ
ಘನುಲು

ಜರಡಿ ಹಿಡಿಯುವ ಹೊತ್ತಿನಲ್ಲಿ ದೊಡ್ಡವು ಜರಡಿಯಲ್ಲೇ ಉಳಿಯುವುವು. ಹಾಗೆಯೇ ಭಕ್ತರಾದವರು ಶ್ರೀಹರಿಯ ಬಳಿಯೇ ಇರುವರೆಂದೂ, ಹಾಗಲ್ಲದವರು ಅಧಃಪತನ ಹೊಂದುವರೆಂದೂ ಅನ್ನಮಯ್ಯನ ಅಭಿಪ್ರಾಯ. ಒಂದು ಜರಡಿಯೇ ಅಲ್ಲ ಬೇಸಾಯಕ್ಕೆ ಬಳಸುವ ಎಲ್ಲ ಉಪಕರಣಗಳಲ್ಲೂ ಆತನಿಗೆ ಅನುಭವವಿದೆ. ಇವುಗಳಿಗೆ ಸಂಬಂಧಿಸಿದ ಗಾದೆಗಳನ್ನು ಆಗಾಗ ತನ್ನ ಕವಿತೆಯಲ್ಲಿ ಬಳಸಿದ್ದಾನೆ, ಕೆಲ ಉದಾಹರಣೆಗಳೆಂದರೆ;

ಬಾತಿ ಲೇನಿ ದಾರವೋತ ಪಾಪಮು
ಚೂಡನಿ ಚೇತ
ನಾತಿ ಮೀದಿ ತಲಪೋತ ನಾಗೇಟಿಗೀತ
(12–274)

ಮುಂಚಿ ಮುಂಚಿ ನೀಟಿಲೋನ
ಮೂಲನಾನಬೆಟ್ಟುಕುನ್ನ
ಮಿಂಚಿನ ಗೊಡ್ಡಲಿ ನೇಡು ಮೆತ್ತನಯ್ಯೀನಾ
(5–190)

(ಮೂಲೆಯಲ್ಲಿಟ್ಟು ನೆನೆಸಿದರೆ ಮಾತ್ರ ಕೊಡಲಿ ಮೆತ್ತಗಾಗುವುದೇ)

ಗಡ್ಡಪಾರ ಮಿಂಗಿತೆ ಆಕಲಿ ತೀರೀ ನಾ
ವೊಡ್ಡಿನ ಭವಮು ತನ್ನು ವೊಡ ಕಮ್ಮುಗಾಗ
ಪೆನುಗಾಲಿಕಿ ಚಿಂಪಿ ಚಾಟುಲಡ್ಡಮಾ
(2–1 )

(ಗಡಾರಿಯನ್ನು ನುಂಗಿದರೆ ಹಸಿವು ತೀರುವುದೇ? ಬಿರುಗಾಳಿಗೆ ಮೊರ ಅಡ್ಡವೇ?)

ಗಪಿರಾಜು ಬದುಕಾಯ ಕಡಲೇನಿ ಮನಸು
ನಡಿವೀಧಿ ಪೆಸರಾಯ ನಯವ್ಯೆನ ಮನಸು
(11–3–125)

(ನಡುಬೀದಿಯ ಹೆಸರು ಬೆಳೆಯಂತೆ, ಕಪಿರಾಜನ ಬದುಕಿನಂತೆ ಮನ)

ಅನ್ನಮಯ್ಯ ಇಂದಿನ ಕಡಪ ಜಿಲ್ಲೆಗೆ ಸಂದವನೆನ್ನುವರು. ಕಡಪ ಜಿಲ್ಲೆ ಇಂದೇ ಅಲ್ಲ ಅಂದೂ ನಿಂಬೆ ಗಿಡಗಳಿಗೆ ಪ್ರಸಿದ್ಧವಾಗಿತ್ತು. ನಿಂಬೆ ಬೆಳೆಯನ್ನು ಕುರಿತು ಅನ್ನಮಯ್ಯ ಹೇಳುತ್ತಾನೆ.

ನಿಮ್ಮ ಪಂಟವೇಯಗಾನು ನಿಕ್ಕಮುಗಾ
ವಚ್ಚೇನನಿ
ನಮ್ಮಿತಿಗಾ ಯಾದವ ನಾರಾಯಣಾ
(16–2–22)

(ನಿಂಬೆಯ ಬೆಳೆ ನಿಶ್ಚಯವಾಗಿ ಬರುವುದು)

ರಮ್ಮನಿ ಚೇರ ಪಿಲಚಿ ರಾಕುನ್ನಾದನಚೇತಿ
ನಿಮ್ಮ ಪಂಟಗೂನಿವೇಸೇ ನನ್ನುನು
(ಕರೆದರೆ ಬರಲು ನಾನು ನಿಂಬೆಯ ಬೆಳೆಯೇನು)

ಇನ್ನು ಕಬ್ಬಿನ ಬೆಳೆಯನ್ನು ಹೆಸರಿಸುವ ಸಂದರ್ಭಗಳು;

ಚಿಕ್ಕೆನು ನಾಕುದೊಲ್ಲಿ ಚೆರಕು ಪಂಡಿನ ಪಂಟ
ಪೆಕ್ಕು ಮಾರಲು ಮೀರು ಪೆನಗೇರುಗಾನಿ
(1[illegible]–269)

(ಕಬ್ಬಿನಂತೆ ನನಗೆ ಸಿಕ್ಕಿದೆ, ನೀವು ಹುಡುಕುತ್ತಿದ್ದೀರಿ)

ಚೆಯ್ಯಾರ ನಾತನಿಕೊಪ್ಪ ಸೇಯನಿ
ಭೋಗಮುಲೆಲ್ಲಾ
ಚೆಯ್ಯನ ಚೆರಕು ಪಿಪ್ಪಿ ಚವಿಗೊನುಟಾ
([illegible]23)

(ಅವನಿಗೆ ಅರ್ಪಿಸದೆ ಮಾಡಿದ್ದೆಲ್ಲ ಕಬ್ಬಿನ ಹಿಪ್ಪೆಯನ್ನ ಸವಿದಂತೆ)

ವೆಟ್ಟ ಚೆರಕು ಪೋಲಿಕಿ ವೆದುರು ನಮಿಲಿನಟ್ಲು
ಪಟ್ರನ ಯೀ ಕನಕಮೇ ಬ್ರಹ್ಮ ಮನವಲಸಿ
(9–15)

(ಕಬ್ಬಿನಂತೆಯೇ ಇರುವ ಬಿದಿರನ್ನು ತಿಂದಂತೆ)

ಅವರೆ ಉದ್ದು ಹೆಸರುಗಳಂತಹ ದ್ವಿದಳ ಧಾನ್ಯಗಳು ಸಹ ಅನ್ನಮಯ್ಯನ ಹಾಡುಗಳಲ್ಲಿ ಕಂಡು ಬರುತ್ತವೆ.

ಕನನೀ ಕನನೀ ಕಲನಕಡಲ ಚುಟ್ಟರಿಕಾಲು
ಅನುಮೇ ಮಿನುಮುವೈತೇನದೆವ್ವರಿ ಮೇಲು
(15–105)

(ಅವರೆ ಉದ್ದು ಆದರೆ ಯಾರಿಗೇನು ಪ್ರಯೋಜನ)

ಈ ವಿಧವಾಗಿ ಹೊಲದೊಂದಿಗೂ ಹೊಲದ ಕೆಲಸದೊಂದಿಗೂ ಅನ್ನಮಯ್ಯನಿಗೆ ಇರುವ ಸಂಬಂಧ ಆತನ ಕವಿತೆಗಳಲ್ಲಿ ಪ್ರಕಟವಾಗುತ್ತದೆ. ಕೇವಲ ಬೇಸಾಯಕ್ಕೆ ಸಂಬಂಧಿಸಿದಂತೆ ಮಾತ್ರವೇ ಈ ಪರಿಶೀಲನೆ ನಡೆದಿದೆ. ಒಟ್ಟು ಗ್ರಾಮೀಣ ಜೀವನವನ್ನು ತೆಗೆದುಕೊಂಡರೆ ಇನ್ನೂ ಅನೇಕ ಅಂಶಗಳು ಕಂಡು ಬಂದು ಅನ್ನಮಯ್ಯ ತನ್ನ ಹಾಡುಗಳಲ್ಲಿ ಗ್ರಾಮೀಣ ಜೀವನಕ್ಕೆ ಕನ್ನಡಿ ಹಿಡಿದಿರುವುದನ್ನು ಕಾಣಬಹುದು. ಪ್ರಾಚೀನ ತೆಲುಗು ಕವಿಗಳಲ್ಲಿ ಬಹುತೇಕ ಇರದಂತಹ ಈ ರೈತ ಪಕ್ಷಪಾತ ಅನ್ನಮಯ್ಯನಿಗೆ ತೆಲುಗು ಸಾಹಿತ್ಯದಲ್ಲಿ ಒಂದು ಪ್ರತ್ಯೇಕ ಸ್ಥಾನವನ್ನು ಕಲ್ಪಿಸುತ್ತದೆ. ★

ಮೂಲ:

**ಶ್ರೀ ಟಿ. ಸುಧಾಕರ ರೆಡ್ಡಿ ಎಂ.ಎ.**

# ಪುಸ್ತಕ ವಿಮರ್ಶೆ

ಲೇಖಕರು ಮತ್ತು ಪ್ರಕಾಶಕರು :
**ಹೆಚ್.ಜೆ. ರಾಮಯ್ಯಂಗಾರ್**
117/5 ಎ,
ಶ್ರೀ ಲಕ್ಷ್ಮೀ ವೆಂಕಟೇಶ ಸದನ,
ಬಸವಣ್ಣನಗುಡಿ ಬೀದಿ ಅಡ್ಡ ರಸ್ತೆ,
ಬೆಂಗಳೂರು – 5 60,019
ಬೆಲೆ: 30/-
( ಮೂವತ್ತು ರೂಪಾಯಿಗಳು )

ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರತಿಷ್ಠಾಪಿಸಿದ ಆಚಾರ್ಯ ರಾಮಾನುಜರು ಮಾನವರ ಮೇಲ್ಮೆಗಾಗಿ ಕಾಯಾವಾಚಾ ಶ್ರಮಿಸಿ ಕೃತಕೃತ್ಯರಾದರು. ಭಾರತೀಯ ವೇದಾಂತ ಸಾಹಿತ್ಯದಲ್ಲಿ ಪುರುಷ ಪ್ರಕೃತಿ ಪರಮಾತ್ಮ ಇವುಗಳ ನಿರ್ದಿಷ್ಟ ಸ್ವರೂಪವನ್ನು ತೋರಿಸಿ ಕೊಟ್ಟ ಮಹತ್ಕಾರ್ಯ ರಾಮಾನುಜ ಸಿದ್ಧಾಂತದ್ದು. ಮೂರು ತತ್ತ್ವಗಳಾದ ಚಿತ್, ಅಚಿತ್, ಈಶ್ವರ ಪ್ರಸ್ಥಾನತ್ರಯಗಳಲ್ಲಿ ಒಂದು ಮೈಲಿಗಲ್ಲು. ಲೇಖಕರು ಹೇಳುವಂತೆಯೇ "ಈ ಪ್ರಪಂಚದಲ್ಲಿರುವ ವಿಷಯಗಳಲ್ಲಿ ಸಾರತಮವಾದುದು ಯಾವುದು? ಯಾವುದನ್ನು ತಿಳಿಯಬೇಕು? ಯಾವುದನ್ನು ಬಿಡಬೇಕು? ಯಾವುದು ನಮಗೆ ಇಷ್ಟವಾದ ಫಲವನ್ನು ನೀಡುತ್ತದೆ? ಯಾವುದರಿಂದ ನಮಗೆ ಅನಿಷ್ಟ ಫಲ ಉಂಟಾಗುತ್ತದೆ? ಇಷ್ಟವಾದ ಫಲಗಳನ್ನು ದೊರಕಿಸುವ ಸಾಧನಗಳಾವುವು? ಯಾವುದನ್ನು ನೆನಪಿಡಬೇಕು? ಯಾವುದನ್ನು ಮರೆಯ ಬೇಕು? ಪ್ರಪಂಚ ಎಂದರೇನು? ನಾನು ಯಾರು? ಈ ಜಗತ್ತಿಗೆ ನಾನು ಎಲ್ಲಿಂದ ಏಕೆ ಬಂದೆ? ಮುಂದೆ ಎಲ್ಲಿಗೆ ಏಕೆ ಹೋಗುತ್ತಿದ್ದೇನೆ? ನಾನಿಲ್ಲಿರುವುದು ಯಾವ ಉದ್ದೇಶದಿಂದ? ಈ ಜಗತ್ತಿನಲ್ಲಿ ಸ್ಥಿರವಾದ ತತ್ತ್ವವೊಂದಿದೆಯೆ? ದೇವರು ಇದ್ದಾನೆಯೆ? ಇದ್ದರೆ ಅವನ ಸ್ವರೂಪ ಸ್ವಭಾವ ಎಂತಹುದು? ಜೀವ -- ಜಗತ್ತು – ಜಗನ್ನಿಯಾಮಕ ಇವರ ಪರಸ್ಪರ ಸಂಬಂಧ ಎಂತಹುದು? ನಮ್ಮ ಬದುಕಿಗೆ ನಿರ್ದಿಷ್ಟಗುರಿ, ಅರ್ಥ ಇದೆಯೆ? ಆ ಗುರಿಯನ್ನು ಸಾಧಿಸುವುದು ಎಂತು? ಗುರಿ ಮುಟ್ಟಿದಾಗ ಜೀವ ಏನಾಗುತ್ತದೆ ಹಾಗೂ ಹೇಗಿರುತ್ತದೆ? ವಿಚಿತ್ರ ಹಾಗೂ ವಿವಿಧ ಆದ ಮಾನವ ಜೀವನಕ್ಕೆ ವ್ಯವಸ್ಥಿತ ಕಾರಣವೊಂದಿದೆಯೆ? ಸುಖ – ದುಃಖಗಳ ಹಿನ್ನೆಲೆಯೇನು? ಸುಖವು ಐಹಿಕವೆ? ಆಧ್ಯಾತ್ಮಿಕವೆ? ಅಥವಾ ಎರಡೂ ಸೇರಿದುದೆ? ಸಾವೆಂದರೆ ಏನು? ಸಾವಿನಾಚೆ ಏನಿದೆ? ಕಾಣುವ ಜಗತ್ತು ವಾಸ್ತವವೆ? ತೋರಿಕೆಯ ಹುಚ್ಚಾಟವೇ? ಇದಕ್ಕೆ ಕೊನೆಯುಂಟೆ? ಇದ್ದರೆ ಯಾವಾಗ, ಎಲ್ಲಿ, ಏಕೆ, ಹೇಗೆ? ಜೀವ - ಜಗತ್ತು ಸ್ವತಂತ್ರರೆ? ಅಥವಾ ನಿಯಮಗಳಿಗೊಳಪಟ್ಟ ದಾಸರೆ? ಈ ಜಗತ್ತಿನಲ್ಲಿ ಬಾಳುವೆ ಮಾಡುವುದು ಹೇಗೆ? - ಎಂಬೀ ಹತ್ತಾರು ಪ್ರಶ್ನೆ ಸಂದೇಹಗಳಿಗೆ ಸರಿಯಾದ ಉತ್ತರ - ವಿವರಣೆ ಪಡೆಯಲೋಸುಗ ಮಾನವನು ಅನಾದಿದಿಂದಲೂ ಯತ್ನಿಸುತ್ತ ಬಂದಿದ್ದಾನೆ''.

ಈ ಎಲ್ಲಾ ಪ್ರಶ್ನೆಗಳಿಗೆ ರಾಮಾನುಜರ ಸಿದ್ಧಾಂತವು ಸಮಾನವಾದ ಉತ್ತರವನ್ನಿತ್ತದೆ ಅರ್ಥ ಪಂಚಕ, ಮೋಕ್ಷ, ಅಷ್ಟವಿಧ ಅವಶ್ಯಕತೆಗಳು, ಈಶ್ವರ ಸ್ವರೂಪ, ನಾರಾಯಣ ವರ್ಣನೆ, ಅಚಿತ್ ಸ್ವರೂಪ, ಚಿತ್ ಸ್ವರೂಪ, ಕರ್ಮ ಹಾಗೂ ಪುನರ್ಜನ್ಮ ಸಿದ್ಧಾಂತಗಳು, ಈ ಎಲ್ಲವುಗಳ ವಿಶ್ಲೇಷಣೆಯ ಜೊತೆಗೆ ಶ್ರೀ ರಾಮಾನುಜರ ಗುರು ಪರಂಪರೆಯ ಪರಿಚಯವೂ ಈ ಗ್ರಂಥದಲ್ಲಾಗಿದೆ. ನಲ್ಲಾನ್ ಚಕ್ರವರ್ತಿ, ತಾತಾಚಾರ್ಯ, ಶೋಮಾಶಿಯಾಂಡಾನ್, ಯತಿರಾಜ ಮಠ, ಪರಕಾಲ ಮಠ, ಅಹೋಬಿಲ ಮಠ. ಆಂಡವನ್, ಇತ್ಯಾದಿ ಪರಂಪರೆಗಳ ಪರಿಚಯವೂ ಅಲ್ಲಿ ಅಗಿದೆ.

# ಶ್ರೀ ರಾಮಾನುಜ ಸಿದ್ಧಾಂತ ದರ್ಪಣ

ಶ್ರೀ ವೈಷ್ಣವ ಸಿದ್ಧಾಂತದ ದರ್ಪಣವೂ ಆಗಿರುವ ಈ ಕೃತಿ ತನ್ನ ಹೆಸರಿಗೆ ತಕ್ಕಂತೆ ಆ ಸಿದ್ಧಾಂತವನ್ನು ಪ್ರತಿಬಿಂಬಿಸಿದೆ. ಭಾರತೀಯ ತತ್ತ್ವ ಶಾಸ್ತ್ರದಲ್ಲಿ ಒಂದು ಪ್ರಮುಖ ಅಂಶವಾದ ವಿಶಿಷ್ಟಾದ್ವೈತವನ್ನು ವಿವರಿಸುವ ಈ ಕೃತಿ ತಾತ್ತ್ವಿಕರಿಗೆ ಕನ್ನಡದಲ್ಲಿ ದೊರೆತಿರುವ ಒಂದು ಕೊಡುಗೆ ಎಂದು ಹೇಳಬಹುದು.

**— ಕುಮುದಪ್ರಿಯ**



# ಗೃಹಲಕ್ಷ್ಮಿ





# ಶ್ರೀವಾದಿರಾಜರು

ದ್ವೈತ ಸಿದ್ಧಾಂತದ ಪ್ರತಿಪಾದನಾಚಾರ್ಯರಾದ ಮಧ್ವಾಚಾರ್ಯರಿಂದ ಮೊದಲುಗೊಂಡು ಇಂದಿನ ಆ ಪೀಠದಯತಿ ಶ್ರೇಷ್ಠರವರಿಗೂ, ಪ್ರತಿಯೊಬ್ಬ ಮಹನೀಯರೂ ಸಮಾಜದ ಒಂದು ಅಂಗವಾದ ಪುರುಷನಿಗೆ ಯಾವ ಸ್ಥಾನವನ್ನು ಕೊಟ್ಟಿದ್ದಾರೋ ಭಕ್ತಿಯ ಅಥವಾ ಅನುಭವದ ಪಾತ್ರದಲ್ಲಿ ಸಮಾಜದ ಇನ್ನೊಂದು ಅಂಗವಾದ ಮಹಿಳೆಗೂ ಅದೇ ಸ್ಥಾನ ಕೊಟ್ಟಿದ್ದಾರೆಂಬುದು ನಿರ್ವಿವಾದವಾಗಿದೆ. ಯಾಕೆಂದರೆ ಮಧ್ವಮುನಿಗಳ ಸೋದರಿಯಾದ ಮಹಾನುಭಾವಳಾದ ಕಲ್ಯಾಣಿದೇವಿಯ ಸ್ಥಾನ ಹಿರಿದಾಗಿದೆ. ಅಂತೆಯೇ ಹೆಳವನಕಟ್ಟೆ ಗಿರಿಯಮ್ಮ, ಪ್ರಯಾಗವ್ವ, ಗಲಗಲಿ ಅವ್ವ, ಹರಪನಹಳ್ಳಿಯ ಭೀಮವ್ವನವರು – ಹೀಗೆ ಅನೇಕ ಮಹಿಳೆಯರು ಭಗವದ್ಭಕ್ತರಾಗಿ, ಸಿದ್ಧಾಂತದ ಪ್ರಮೇಯಗಳನ್ನೆಲ್ಲಾ ಲೀಲಾಜಾಲವಾಗಿ ಆಡು ಮಾತಿನಲ್ಲಿ ಹಾಡಿದ್ದಾರೆ, ಕಾವ್ಯವಾಗಿ ನುಡಿದಿದ್ದಾರೆ. ಸತ್ಯಸಿದ್ಧಾಂತದ ಕಡುಕಠಿಣವಾದ ವಾಗ್ಭಂಡಾರ ಇವರಿಗೆ ಕರಗತವಾದದ್ದು ಹೇಗೆ? ಇವರಾರೂ ಹೇಳಿಕೊಳ್ಳುವಂತಹ ಸಂಸ್ಕೃತದ ವಿದ್ವನ್ಮಣಿಗಳಾಗಿರಲಿಲ್ಲ ಎಂದರೆ ಇದು ಅಲ್ಲಿನ ಯತಿಗಳ ಹಾಗೂ ದಾಸರ ಕರುಣೆ ಎಂದು ಹೇಳಬೇಕು.

ಶ್ರೀ ಕೃಷ್ಣದೇವರಾಯನ ಕುಹುಯೋಗವನ್ನು ನಿವಾರಿಸಿದ ವ್ಯಾಸರಾಯರು ಶ್ರೀಪಾದರಾಯರ ಶಿಷ್ಯರು. ಹಂಪೆಯಲ್ಲಿ ದಾಸಕೂಟವೊಂದನ್ನು ಸ್ಥಾಪಿಸಿ ಪುರಂದರ, ಕನಕ, ವೈಕುಂಠ ದಾಸರುಗಳನ್ನು ಕನ್ನಡದಲ್ಲಿ ಸಂಕೀರ್ತನ ಸಾಹಿತ್ಯ ನಿರ್ಮಾಣದಲ್ಲಿ ತೊಡಗಿಸಿದವರು. ಅವರಲ್ಲಿ ಶಾಸ್ತ್ರಾರ್ಥ ವಿಚಾರ, ಸಂಸ್ಕೃತಾಧ್ಯಯನಕ್ಕಾಗಿ ವ್ಯಾಸಕೂಟವೂ ಒಂದಿತ್ತು. ಅಲ್ಲಿ ವ್ಯಾಸರಾಜರ ಬಳಿ ಇಪ್ಪತ್ತಾಲ್ಕು ಜನ ಯತಿಗಳು ವಿದ್ಯಾಭ್ಯಾಸ ಮಾಡುತ್ತಿದ್ದರು. ಇವರಲ್ಲಿ ಸೋದೆ ಮಠದ ಶ್ರೀವಾದಿರಾಜರಿದ್ದರು. ಇವರು ಸಂಸ್ಕೃತದಲ್ಲಿ ರಚನೆಗಳನ್ನು ಮಾಡುತ್ತಿದ್ದಂತೆ ಕನ್ನಡದಲ್ಲಿಯೂ ಕೃತಿ ರಚನೆ ಮಾಡುತ್ತಿದ್ದರು. ಇವರು ಮಹಿಳೆಯರಿಗಾಗಿ ಭಾರತ–ಭಾಗವತಗಳ ಸಾರವನ್ನು ಪ್ರಮೇಯಗಳನ್ನು ಸುಲಭ ಕನ್ನಡದಲ್ಲಿ ಭಟ್ಟಿಯಿಳಿಸಿದರು. ಇವುಗಳಲ್ಲಿ ಭಾಗವತದ ರಸಘಟ್ಟಿಯಾದ ಲಕ್ಷ್ಮೀ ಶೋಭಾನೆ ಬಹಳ ಮನೋಹರವಾದ ಕೃತಿ.

ಇಲ್ಲಿ ವಾದಿರಾಜರು ಒಂದು ಸುಂದರವಾದ ಸ್ವಯಂವರವನ್ನು ನಿರ್ಮಿಸಿದ್ದಾರೆ. ಅದೇ ತಾನೇ ಕ್ಷೀರಸಾಗರ ಮಥನವಾಗಿದೆ. ಕಾಮಧೇನು ಕಲ್ಪವೃಕ್ಷಗಳೆಲ್ಲಾ ಉದಿಸಿಬಂದಿವೆ. ಆಗಲೇ ರಮಾದೇವಿಯೂ ಅದರಿಂದ ಉದಿಸಿ ಬಂದಿದ್ದಾಳೆ. ಆಕೆ ಉದಿಸಿದಾಗಲೇ ನವತರುಣಿಯಾಗಿದ್ದಾಳೆ. ತನ್ನ ಮೋಹಕ ಕಾಂತಿಯನ್ನು ಎಲ್ಲೆಡೆ ಬೀರಿದ್ದಾಳೆ. ಇವಳ ಅಂದ ಚೆಂದಗಳಿಗೆ ಬೆರಗಾಗಿ ಈಕೆ ತನ್ನ ಕರದಲ್ಲಿ ಪಿಡಿದಿರುವ ಎಂದೆಂದಿಗೂ ಬಾಡದ ಅರವಿಂದ ಮಾಲೆಯನ್ನು ಯಾರ ಕೊರಳಿಗೆ ಹಾಕುತ್ತಾಳೋ ಎಂದು ದೇವತೆಗಳೂ ಋಷಿಗಳೂ ಕತ್ತು ಚಾಚಿ ಕುಳಿತಿದ್ದಾರೆ. ಅವಳನ್ನು ವಾದಿರಾಜರು ವರ್ಣಿಸುತ್ತಾರೆ.

'ಆಕೆ ನವತರುಣಿ ಪೀತಾಂಬರವನ್ನುಟ್ಟಿದ್ದಾಳೆ. ಸ್ವರ್ಣದ ಕಂಚುಕ ತೊಟ್ಟಿದ್ದಾಳೆ. ಸೊಂಟಕ್ಕೆ ಕಟ್ಟಿರುವ ರನ್ನದ ಒಡ್ಯಾಣ ಕಿರುಗೆಜ್ಜೆಗಳಿಂದ ಕೂಡಿದೆ. ಕಾಲಂದುಗೆ ಘಲಿಘಲಿರೆನ್ನುತ್ತಿದೆ. ಆಕೆಯ ನಾನಾವಿಧವಾದ ಚಿನ್ನದ ಆಭರಣಗಳು ಚಂದ್ರಬಿಂಬದಂತಿರುವ ಆಕೆಯ ಮುಖವನ್ನು ಮೋಹಕವಾಗಿ ಆವರಿಸಿವೆ. ಆಕೆ ಮುತ್ತಿನ ವೋಲೆಯಿಟ್ಟಿದ್ದಾಳೆ. ಚಂದ್ರ ಬಿಂಬದಂತಿರುವ ರತ್ನದ ಮೂಗುತಿಯನ್ನು ಧರಿಸಿದ್ದಾಳೆ. ಕಸ್ತೂರಿ ತಿಲಕವನ್ನು ಹಚ್ಚಿಕೊಂಡಿದ್ದಾಳೆ. ನವರತ್ನದ ಮುಕುಟವನ್ನು ಧರಿಸಿದ್ದಾಳೆ. ಕಪ್ಪಾದ ತುರುಬಿನಲ್ಲಿ ಮಲ್ಲಿಗೆ, ಜಾಜಿ ಮಂದಾರ ಕುಸುಮಗಳ ಮಾಲೆ ಮುಡಿದಿದ್ದಾಳೆ. ಆಕೆಯ ಬಣ್ಣವಾದರೋ ಒಳ್ಳೆಯ ಚಿನ್ನದ ಬಣ್ಣ. ಮುಖ ನಳನಳಿಸುವ ಹೊಸ ಹೂವಿನಂತಿದೆ. ಎರಡು ಕೈಗಳಲ್ಲಿ ಕಮಲ ಪುಷ್ಪಗಳನ್ನು ಹಿಡಿದಿದ್ದಾಳೆ. ಒಂದು ಅಭಯ ಹಸ್ತವಾದರೆ ಇನ್ನೊಂದು ವರದ ಹಸ್ತ. ಇನ್ನೆರಡು ಕೈಗಳಲ್ಲಿ ಎಂದೆಂದಿಗೂ ಬಾಡದ ಅರವಿಂದದ ಮಾಲೆಯನ್ನು ಪಿಡಿದು ಇತ್ತ ಅತ್ತ ಸಾಲಾಗಿ ಕುಳಿತವರೆಲ್ಲರನ್ನೂ ನೋಡುತ್ತಾ ಮೆಲ್ಲಮೆಲ್ಲಗೆ ನಡೆದು ಬರುತ್ತಿದ್ದಾಳೆ.

'ಅಲ್ಲಿ ಕುಳಿತವರೆಲ್ಲಾ ತನ್ನ ಮಕ್ಕಳೇ; ಮಹಾತಪಸ್ವಿಗಳಿದ್ದಾರೆ, ಜ್ಞಾನಿಗಳಿದ್ದಾರೆ, ಧರ್ಮಾತ್ಮರಿದ್ದಾರೆ. ಆದರೇನು ಕೆಲವರು ಶೀಘ್ರ ಕೋಪಿಗಳು, ಕೆಲವರು ಎಷ್ಟೇ ವಿದ್ವಾಂಸರಾಗಿದ್ದರೂ ಕೂಡ ಧನದ ಲೋಭವನ್ನು ಬಿಡದೆ ದೇವಾಸುರರನ್ನು ಆಶ್ರಯಿಸಿದ್ದಾರೆ. ಒಬ್ಬನಂತೂ ಧರ್ಮಾತ್ಮನಂತೆ, ಆದರೆ ಆತನಲ್ಲಿ ದಯೆಯೆಂಬುದೇ ಇಲ್ಲ. ಒಬ್ಬ ಕಾಮಿನಿಗೆ ಸೋತಿದ್ದಾನೆ. ಮತ್ತೊಬ್ಬ ಭಾಮಿನಿಯ ಹಿಂದೆ ಹಾರಿದ್ದಾನೆ. ಮಗದೊಬ್ಬ ಗುರುವಿನ ಪತ್ನಿಯನ್ನೇ ಹಾರಿಸಿದ್ದಾನೆ. ಕುಬೇರನಿಗಾದರೋ ನಶ್ವರವಾದ ಐಶ್ವರ್ಯದ ಅಪೇಕ್ಷೆ. ಒಬ್ಬ ಮಾವನನ್ನೇ ಕೊಂದಿದ್ದಾನೆ–ಹೀಗೆಯೇ ಆಕೆ ಒಬ್ಬೊಬ್ಬರ ಕುಂದುಗಳನ್ನು ಎಣಿಸುತ್ತಾ, ಕೊನೆಗೆ 'ಶ್ರೀಮನ್ನಾರಾಯಣನೊಬ್ಬನೇ ಕುಂದಿಲ್ಲದವನು. ಆತ ಸಕಲ ಗುಣಗಳ ಗಣಿ, ಆತನಿಗೆ ಹಸಿವು ತೃಷೆ, ಜರಾ, ಮರಣ, ವಾತ, ಪಿತ್ಥ ಕಫಗಳ ಯಾವ ಬಾಧೆಯೂ ಇಲ್ಲ' ಎಂದು ನಿರ್ಣಯಿಸಿ ಅವನ ಒಂದೊಂದೂ ಗುಣದ ಸಿಂಹಾವಲೋಕನ ಮಾಡುತ್ತಾಳೆ.

'ಆತ ಆಕಳಿಸುವಾಗ ಯಶೋದೆಗೆ ಬಾಯಲ್ಲಿ ಜಗವನ್ನೇ ತೋರಿದ್ದಾನೆ. ಅನೇಕ ಕೋಟಿ ಅಜಾಂಡವನ್ನು ತನ್ನ ಉದರದಲ್ಲಿಯೇ ಹುದುಗಿಸಿ ಕೊಂಡಿದ್ದಾನೆ. ಸೃಷ್ಟಿಯೆನ್ನುವುದು ಅವನಿಗೆ ಮಕ್ಕಳಾಟಕೆ ಮದನನಿಗೇ ತಂದೆಯಾದ ಇವನಿಗೆ ಮದನ ತಾಪವೆಂಬುದಿಲ್ಲ. ಇವನ ಉಂಗು

ಶ್ರೀಮತಿ ರುಕ್ಮಿಣಿ ಗಿರಿಮಾಜಿ ಎಂ.ಎ.

ಷ್ಣವನ್ನು ತೊಳೆದ ಗಂಗಾದೇವಿ ಪಾವನಳೆನಿಸಿ ಕೊಂಡು ಜನರ ತಾಪ – ಪಾಪಗಳನ್ನು ಕಳೆಯು ತ್ತಾಳೆ. ತಾಯಿಯ ಹೊಟ್ಟೆಯಿಂದ ಬರುವಾಗಲೇ ಶಂಖ ಚಕ್ರಧಾರಿಯಾಗಿ ಬಂದ ಈತ ಎಲ್ಲರಂತೆ ತಾಯಿಯ ಹೊಟ್ಟೆಯಲ್ಲಿದ್ದುಕೊಂಡು ಸಂಕಟಪಟ್ಟನೆನ್ನಬಹುದೆ? ಈತ ಹದಿನಾರು ಸಾವಿರು ಸ್ತ್ರೀಯರನ್ನು ಮದುವೆಯಾದ. ಒಬ್ಬೊಬ್ಬರಲ್ಲೂ ಹತ್ತು ಹತ್ತು ಮಕ್ಕಳನ್ನು ಪಡೆದ ಎಂದರೆ ಇದು ಯಾರಿಗಾದರೂ ಸಾಧ್ಯವೇ! ಜಗದೋದ್ಧಾರಕನಾದ ಈತನ ಲೀಲೆಗಳು ಅನೇಕ. ಇವನೇ ಶ್ರೀಹರಿಸರ್ವೋತ್ತಮ ಎಂದು ವರ್ಣಿಸುತ್ತಾ ಅವನೆಡೆಗೆ ಸಾರಿ ನಾನಾ ಕುಸುಮಗಳಿಂದ ನೇಯ್ದ ಮಾಲೆಯನ್ನು ತನ್ನ ಕರದಲ್ಲಿ ಪಿಡಿದು ಪೀನ ಕಂಧರದ ತ್ರಿವಿಕ್ರಮರಾಯನ ಕೊರಳಿನ ಮೇಲಿಟ್ಟು ನಮಿಸಿದಳು'.

'ನಂತರ ಅವರಿಬ್ಬರ ವಿವಾಹ ವಿಧಿವತ್ತಾಗಿ ಜರುಗಿತು. ದೇವನಾರಿಯರೆಲ್ಲರೂ ವಧೂವರರನ್ನು ಹಸೆಗೆ ಕರೆದು ಆರತಿಯೆತ್ತಿದರು. ಒಬ್ಬೊಬ್ಬ ದೇವತೆಯೂ ವಧೂವರರಿಗೆ ಬೇಕಾದ ವಸ್ತುಗಳನ್ನು ಓದಿಸಿದರು. ಆಗ ಸಮುದ್ರರಾಜನು ಇವರಿಗೆಲ್ಲಾ ಔತಣ ಮಾಡಿಸಿದ. ಹಾಗೆ ಔತಣ ಮಾಡಿಸುವಾಗ ಹೊಟ್ಟೆಕಿಚ್ಚಿನ ದಾನವರು ಏನಾದರೂ ಅಡ್ಡಿ ತರುವರೆಂದು ಶ್ರೀಹರಿಯು ಮೋಹಕವಾದ ಹೆಣ್ಣುರೂಪವನ್ನು ಧರಿಸಿ ತನ್ನ ಜನರಿಗೆಲ್ಲಾ ಅಮೃತವನ್ನು ಬಡಿಸಿದ. ನಾಗಬಲಿಯಾ ನಡೆಯಿತು. ಸಮುದ್ರರಾಜನು ದೇವತೆಗಳಿಗೆ ಬೇಕಾದಂತಹ ಬಹುಮಾನಗಳನ್ನಿತ್ತ. ತನ್ನ ಅಳಿಯ ತನ್ನಲ್ಲೇ ಇರಬೇಕೆಂದು ನವರತ್ನಮಯವಾದ ಅರಮನೆಯನ್ನು ಮಾಡಿಸಿಕೊಟ್ಟ. ಶ್ರೀಹರಿಯು–ಹಯವದನನು–ತನ್ನ ಪ್ರಿಯಳಾದ ಲಕುಮಿಯೊಡಗೂಡಿ ಎಲ್ಲರನ್ನೂ ಸಲಹುತ್ತಾನೆ – ನಮ್ಮನ್ನೂ ಸಲಹಲಿ' – ಮದುವೆಯ ಮನೆಯಲ್ಲಿ ಈ ಪದವನ್ನು ಹಾಡಿದರೆ ವಧೂವರರಿಗೆ ಒಳ್ಳೆಯದಾಗುತ್ತದೆ. ವಧುವಿಗೆ ಓಲೆಭಾಗ್ಯ ಹೆಚ್ಚುತ್ತದೆ. ಈ ಪದವನ್ನು ಯಾರು ಹಾಡುತ್ತಾರೋ ಅವರ ಆಯುಷ್ಯ–ಭವಿಷ್ಯವೆರಡೂ ಹೆಚ್ಚುತ್ತದೆ ಎಂದು ಹೇಳಿ–

ಶೋಭಾನವೆನ್ನೀರೆ ಸುರರೊಳು ಸುಭಗನಿಗೆ
ಶೋಭಾನವೆನ್ನೀ ಸುಗುಣನಿಗೆ
ಶೋಭಾನವೆನ್ನೀರೆ ತ್ರಿವಿಕ್ರಮರಾಯಗೆ
ಶೋಭಾನವೆನ್ನೀ ಸುರ ಪ್ರಿಯಗೆ!

ಎಂದು ಮುಗಿಸುತ್ತಾರೆ ವಾದಿರಾಜರು. ಈ ಶೋಭಾನೆಯ 108+ 4=112 ಪದಗಳಲ್ಲಿ ಭಾಗವತದ ಇಡೀ ದಶಮಸ್ಕಂಧವಡಗಿದೆ. ಇದನ್ನು ಹಿಂದಿನ ಪೀಳಿಗೆಯು ಹೆಂಗಸರೆಲ್ಲರೂ ಅನ್ನುತ್ತಾರೆ. ಇಂದಿನ ಪೀಳಿಗೆಯು ಕೆಲವರಾದವರೂ ಇದನ್ನು ಬಲ್ಲರು.

ವಾದಿರಾಜಸ್ವಾಮಿಗಳು ಬಾಲಯತಿಗಳು, ಅವರು ಸ್ತ್ರೀರೂಪವನ್ನು ಇಷ್ಟು ಮೋಹಕವಾಗಿ ಹೇಗೆ ಬಣ್ಣಿಸಿದರು ಎಂದರೆ ಅವರು ಸ್ವತಃ ರಮಾದೇವಿಯನ್ನು ಕಂಡುವರು. ಹಿಂದೆ ದ್ವಾಪರಯುಗದಲ್ಲಿ ಭೀಷ್ಮಕ ರಾಜನ ಮಗಳಾದ ರುಕ್ಮಿಣೀದೇವಿಯು ಶ್ರೀಕೃಷ್ಣನನ್ನೇ ಮದುವೆಯಾಗ ಬಯಸಿ 'ತಾನು ಗೌರೀಪೂಜೆಗೆ ನಗರದ ಹೊರವಲಯದ ದೇವೀಮಂದಿರಕ್ಕೆ ಪೂಜೆಗೆ ಹೊರಟಾಗ ನೀನು ಬಂದು ನನ್ನನ್ನು ಕರೆದೊಯ್ಯು' ಎಂದು ಶ್ರೀಕೃಷ್ಣನಿಗೆ ಒಂದು ಪತ್ರವನ್ನು ಬರೆದು ಅದನ್ನು ಒಬ್ಬ ವಿಪ್ರನ ಕೈಲಿ ಕೊಟ್ಟು ಕಳುಸಿದಳಂತೆ. ಆತನೇ ಮುಂದೆ ವಾದಿರಾಜರಾದರು ಎಂಬ ಪ್ರತೀತಿಯಿದೆ.

ವೈದಿಕ ಸಂಪ್ರದಾಯಸ್ಥರೆಲ್ಲರೂ ಹೊಸದಾಗಿ ಮದುವೆಯಾದ ವಧೂವರರನ್ನು ಲಕ್ಷ್ಮೀನಾರಾಯಣರೆಂದೇ ಭಾವಿಸುತ್ತಾರೆ. ಹಿಂದಿನ ಕಾಲದಲ್ಲಿ ದೇಶವು ಸುಭಿಕ್ಷವಾಗಿದ್ದಾಗ ಮದುವೆಗಳು ನಾಲ್ಕೆಂಟುದಿನಗಳು ನಡೆಯುತ್ತಿದ್ದುವು. ಮದುವೆ ಮುಂಜಿಗಳಲ್ಲಿ ಹಬ್ಬ ಹರಿದಿನಗಳಲ್ಲಿ ನೆಂಟರಿಷ್ಟರೆಲ್ಲಾ ಒಂದೆಡೆ ಸೇರಿ ವಿನೋದದಿಂದ ಕಾಲ ಕಳೆಯುತ್ತಿದ್ದರು. ಮದುವೆಯ ಒಂದೊಂದೂ ಅಂಗಗಳು ರಸದ ಬುಗ್ಗೆಗಳಾಗಿರುತ್ತಿದ್ದವು, ಇಂತಹ ಒಂದು ಅಂಗ ಮದುವೆಯ ಉರುಟಣೆ ಮತ್ತು ಬಾಗಿಲು ತಟ್ಟುವಿಕೆ ಈ ಅಂಗಗಳ ಹಾಡುಗಳು ವಾದಿರಾಜರ ಬಾಯಲ್ಲಿ ಹೇಗೆ ಮೂಡಿವೆ ನೋಡಿ–

ಲಕ್ಷ್ಮಿ ರಮಣಗೆ ಮಾಡಿದಳು ಉರುಟಾಣಿ
॥ ಪ ॥
ಇಳೆಯೊಳಗತಿ ಜಾಣೆ ಸುಂದರ ಫಣಿವೇಣಿ
॥ ಅ.ಪ ॥
ಮಚ್ಛ ಕಚ್ಛಪ ಕೀರನೆ ಕೇಸರಿಯಂದದ
ಮುಖನೆ!
ಸ್ವಚ್ಛ ಮುಖವ ತೋರೈ ಕುಂಕುಮ
ಹಚ್ಚುವೆನು ॥
ಬಲಯು ದಾನವ ಬೇಡಿ ಇಳೆಯ
ಈರಡಿಮಾಡಿ!
ಅಳೆದಡಿಗಳ ತೋರೈ ಅರಿಷಿಣ ಹಚ್ಚುವೆನು ॥
ವಸನ ರಹಿತನಾಗಿ ವಸುಧೆಯ ತಿರುಗಿದೆ!
ಬಿಸಜನಾಭನೆ ನಿನಗೆ ವಸನ ಹೊದ್ದಿಸುವೆನು ॥
ವಶ ತುರಗವನೇರಿ ಕಲಿಯ ಸಂಹರಿಸುವ!
ಸಿರಿ ಹಯವದನನೆ ಆರತಿಯೆತ್ತುವೆನು ॥

ಮದುವೆ ಮುಗಿದ ನಂತರ ವಧೂವರರು ಮನೆಯ ದೇವರ ದರ್ಶನಕ್ಕೆ ಬರುತ್ತಾರೆ. ಆಗ ನಾರಿಯರು ಬಾಗಿಲಿಗೆ ಅಡ್ಡ ಕಟ್ಟಿ 'ನೀನ್ಯಾರು' ಎಂದು ಕೇಳಿ ಹೆಸರು ಹೇಳಿಸುತ್ತಾರೆ. ಅಂತಹ ಒಂದು ಸಂದರ್ಭಕ್ಕೆ ವಾದಿರಾಜರು ಇಡಿಯ ದಶಾವತಾರವನ್ನು ಬಳಸಿಕೊಳ್ಳುತ್ತಾರೆ–

"ನೀರೊಳು ಮುಳುಗಿ ನಿಗಮಚೋರನ ಗೆದ್ದ
ನೀರಜಾಕ್ಷನೆ ಭಾಮೆ ನಾ ನೀರಜಾಕ್ಷನೆ
ಭಾಮೆ"
ನಾರುವ ಮೈಯಿನ ನನ್ನಲ್ಲಿ ತೊರದೆ
ಸಾರುಸಾರು ನೀ
ದೂರ ರಂಗ ಸಾರುಸಾರು ನೀ ದೂರಾ

ಶ್ರೀವಿಷ್ಣುವು ಹೀಗೆ ತನ್ನ ದಶಾವತಾರಗಳನ್ನೆಲ್ಲಾ ತನ್ನ ಸಾಹಸಗಳನ್ನೆಲ್ಲಾ ವರ್ಣಿಸಿದರೂ ಕೂಡ ಲಕ್ಷ್ಮೀದೇವಿಯು ಒಂದೊಂದಕ್ಕೂ ಒಂದೊಂದು ಉತ್ತರ ಹೇಳಿ ಹೀಯಾಳಿಸುತ್ತಾಳೆ. ಆಗ,

ಸರ್ವಪ್ರಾಣಿಗಳ ಉದರದೊಳಿಂಬಿಟ್ಟು
ಶರಧಿಯೊಳ ಮಲಗಿದೆ ಭಾಮೇ, ನಾ
ಶರಧಿಯೊಳು ಮಲಗಿದೆ ಭಾಮೆ
ಹೀಗೆಂದಾಗ ಆಕೆ –
ದೊರೆ ಹಯವದನನ ಚರಣಕ್ಕೆರಗುತ
ತೆರೆದಳು ಬಾಗಿಲು ಭಾಮೆ

ಇಷ್ಟೇ ಅಲ್ಲದೆ ನಿತ್ಯ ಪೂಜಾವಿಧಾನದಿಂದ ಹಿಡಿದು ಮಂತ್ರ ಜಪದ ವರೆಗೂ ಪ್ರಮೇಯಗಳಲ್ಲಾ ಚಿಕ್ಕ ಚಿಕ್ಕ ಚೊಕ್ಕನುಡಿಗಳಲ್ಲಿ – ಕನ್ನಡ ಮಹಿಳೆಯರಿಗೆ ಅನುಕೂಲವಾಗುವಂತೆ ವಾದಿರಾಜರು ರಚಿಸಿದ್ದಾರೆ.

ಪ್ರಾರ್ಥನೆ, ದೇವತಾಸ್ತುತಿ, ಸುಳಾದಿ, ಉಗಾಭೋಗಗಳು, ಜೋಗುಳ ಮಂಗಳ–ಯಾವುದನ್ನು ವರ್ಣಿಸಲಾದೀತು. ವಿವಿಧರಾಗ, ತಾಳಗಳಲ್ಲಿ ಮೂರ್ತಗೊಂಡ ಇವರ ದೇವರನಾಮಗಳು ಸುಳಾದಿಗಳೂ ಜಾನಪದ ಮಟ್ಟಿನ ತ್ರಿಪದಿ, ಸಾಂಗತ್ಯ, ಶೋಭಾನೆಗಳೂ ಒಂದಲ್ಲ ಎರಡಲ್ಲ.

ಇಂತಹ ಮಹಾಮಹಿಮರು ದಕ್ಷಿಣ ಕನ್ನಡ ಜಿಲ್ಲೆಯ ಹೂವಿನ ಹಡಗಲಿ ಎಂಬ ಗ್ರಾಮದಲ್ಲಿ ರಾಮಭಟ್ಟ ಮತ್ತು ಗೌರೀದೇವಿಗೆ ಮಗನಾಗಿ ಜನಿಸಿದರು. ವಿದ್ಯಾಭ್ಯಾಸ ಮುಗಿದ ನಂತರ ವಾದಿರಾಜರು ಉಡುಪಿಗೆ ಬಂದರು, ಅಲ್ಲಿದ್ದ ಎರಡು ತಿಂಗಳ ಪರ್ಯಾಯ ಪದ್ಧತಿಯನ್ನು ಎರಡು ವರ್ಷಗಳಿಗೆ ನಿಗದಿಮಾಡಿದರು.

ವಾದಿರಾಜರು ಇಡಿಯ ಭರತ ಖಂಡದ ತೀರ್ಥಕ್ಷೇತ್ರಗಳನ್ನೆಲ್ಲಾ ಸಂದರ್ಶಿಸಿ ಹೋದೆಡೆಯಲ್ಲಾ ವಾದಿನಿಗ್ರಹಮಾಡಿ ತತ್ತ್ವವಾದವನ್ನು ಪ್ರಚಾರಮಾಡಿದರು. ಈ ಪ್ರವಾಸವನ್ನು 'ತೀರ್ಥ ಪ್ರಬಂಧ' ಎಂಬ ಗ್ರಂಥವನ್ನಾಗಿ ಬರೆದರು. ತಮ್ಮ ತಾಯಿಯಾದ ಗೌರೀದೇವಿಯು ದೇವರಿಗೆ ಲಕ್ಷಾ

ಭರಣ ಮಾಡಿಸುವೆನೆಂದು ಹರಸಿ ಕೊಂಡಿದ್ದಳು. ವಾದಿರಾಜರು ಮಹಾಭಾರತಕ್ಕೆ ಲಕ್ಷಾಲಂಕಾರ ವೆಂಬ ಟಿಪ್ಪಣಿಯನ್ನು ಬರೆದು ಆಕೆಯ ಹರಕೆಯನ್ನು ಪೂರೈಸಿದರು. ಇವರ ರುಕ್ಮಿಣೀಶ ವಿಜಯ ಕಾವ್ಯವನ್ನು ಪುಣೆಯ ವಿದ್ವಜ್ಜನರು ಪುರಸ್ಕರಿಸಿ ಆನೆಯಮೇಲೆ ಅಂಬಾರಿಯಲ್ಲಿಟ್ಟು ಅದನ್ನೇ ಮೆರೆಸಿದರು.

ಇವರು ದಲಿತರ ಉದ್ಧಾರವನ್ನು ಮಾಡಿದರು. ಸೊನೆಗಾರರಿಗೆ ಚಕ್ರಾಂಕನಮಾಡಿ ಅವರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಕೋಟೇಶ್ವರದವರಿಗೂ ಚಕ್ರಾಂಕನ ಮಾಡಿ ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಹರಿಜನರಿಗೆ ತುಳುಭಾಷೆಯಲ್ಲಿ ಸ್ತೋತ್ರಗಳನ್ನು ರಚಿಸಿ ಕೊಟ್ಟರು.

ವಾದಿರಾಜರು ಒಂದುನೂರಾ ಇಪ್ಪತ್ತು ವರ್ಷಗಳು ಬದುಕಿದ್ದರು. ಕೊನೆಗಾಲಕ್ಕೆ ಸೋದೆಗೇ ಬಂದರು. ಅಲ್ಲಿ ತ್ರಿವಿಕ್ರಮನನ್ನು ಸ್ಥಾಪಿಸಲು ಇಚ್ಛಿಸಿದರು. ಅರಸಪ್ಪನಾಯಕನಿಗೆ ಹೇಳಿ ಬೃಹತ್ತಾದ ಮಂದಿರವನ್ನು ಕಟ್ಟಿಸಿದರು. ಧವಳಗಂಗಾ ಸರೋವರದ ನಿರ್ಮಾಣವಾಯಿತು. ಭೂತನಾಥನನ್ನು ಬದರಿಗೆ ಕಳಿಸಿ ತ್ರಿವಿಕ್ರಮದೇವರನ್ನು ರಥ ಸಹಿತವಾಗಿ ಬರಿಸಿ ಪ್ರತಿಷ್ಠಿಸಿದರು. ನಂತರ ತಮಗೆ ಬೃಂದಾವನ ನಿರ್ಮಾಣವಾಗಬೇಕೆಂದರು. ಅರಸಪ್ಪ ಹೌಹಾರಿದ. ಅದಕ್ಕೆ ಶ್ರೀಗಳು 'ನಾವು ಶರೀರದೊಂದಿಗೇ ಬೃಂದಾಗಿವನಸ್ಥರಾಗುವವರು. ಆದ್ದರಿಂದ ನಮ್ಮ ಸುತ್ತಲೂ ಬ್ರಹ್ಮ, ವಿಷ್ಣು, ಮಹೇಶ್ವರ ಹಾಗೂ ವಾಯುದೇವರ ಬೃಂದಾವನಗಳಾಗಬೇಕು ಭೂತರಾಜನಿಗೆ ಸ್ಥಳ ನಿರ್ದೇಶನವಾಗಬೇಕೆಂದರು. ಅಂತೆಯೇ ಆಯಿತು. ಫಾಲ್ಗುಣ ಮಾಸದ ಹುಣ್ಣಿಮೆಯಂದು ತ್ರಿವಿಕ್ರಮ ರಥೋತ್ಸವವಾಯಿತು. ಬಹುಳ ತೃತೀಯ (1522 ಶಾರ್ವರಿ ಸಂವತ್ಸರ ಕ್ರಿ.ಶ. 1600)ಸಶರೀರ ಬೃಂದಾವನ ಪ್ರವೇಶ ಮಾಡಿದರು. ಹೀಗೆ ಸಶರೀರರಾಗಿ ಬೃಂದಾವನ ಮಾಡಿದ ಮಾಧ್ವಯತಿಗಳಲ್ಲಿ ಇವರೇ ಮೊದಲಿಗರು. ನಂತರ ರಾಘವೇಂದ್ರ ಗುರುಗಳು ಹೀಗೆ ಸಶರೀರ ವೃಂದಾವನಸ್ಥರಾದರು.

ಸೋದೆಯು ಇಂದು ಒಂದು ಮಹಾ ಜಾಗೃತ ಸ್ಥಳವಾಗಿದೆ. ಭಕ್ತರು ಅಲ್ಲಿ ಸೇರುತ್ತಾರೆ. ಬೃಂದಾವನದ ಸೇವೆ ಮಾಡುತ್ತಾರೆ. ಮೃತ್ತಿಕಾ ಮಂತ್ರಾಕ್ಷತೆಗಳಾದ ತಮ್ಮ ತಾಪತ್ರಯವನ್ನು ದೂರಗೊಳಿಸಿಕೊಳ್ಳುತ್ತಾರೆ. ವಾದಿರಾಜರು ಇಂದಿಗೂ ಆರ್ತರ ಮೊರೆಯನ್ನು ಕೇಳುತ್ತಾರೆ, ಅವರ ದುಃಖವನ್ನು ನಿವಾರಿಸುತ್ತಾರೆ.



# ಕನಸು ಕಾಣಬೇಕಾದರೂ........

ಒಳ್ಳೆಯ ಕನಸುಕಾಣಬೇಕಾದರೂ,
ಎನಿಸು ಜನ್ಮಗಳ ಪುಣ್ಯ ಬೇಕೋ!

ದಾಸರು —
"ಕಂಡೆ ನಾ ಕನಸಿನಲಿ ಗೋವಿಂದನ
ಕಂಡೆ ನಾ ಕನಸಿನಲಿ ಕನಕ ರತ್ನದ ಮಣಿಯ......"
ಮುಂತಾಗಿ, ತಾವು ಕಂಡ ಕನಸಿನ ನೆನಪನ್ನು
ಕೀರ್ತನೆಗಳಲ್ಲಿ ಹಾಡಿ ಕೊಂಡಾಡಿದರು.

ಕನಸುಗಳು ನಮ್ಮೆಲ್ಲರಿಗೆ ದಿನಾಲೂ ಬೀಳುತ್ತವೆ.
( ಕೆಲವರಿಗೆ ಹಗಲೂ ಕನಸುಗಳು ಬೀಳುವುವಂತೆ! )
ಜಾಗ್ರತ್-ಸ್ವಪ್ನ-ಸುಷುಪ್ತಿ ನಿತ್ಯ ಭೇಟಿಯಿತ್ತು
ಮರಳುತ್ತಿವೆ ........ ಆದರೆ, ನಾನು ಕಂಡ ಕನಸನ್ನು,
ಅಬ್ಬಾ! ನೆನಸಿಕೊಂಡರೆ, ಈಗಲೂ ಮೈ ನವಿರೇಳುತ್ತದೆ!

ಹಿಮದಕೊಳದಲ್ಲಿ ಮುಳುಗಿ ಎದ್ದಂತೆ,
ಪಂಚಾಗ್ನಿ ತಪಸ್ಸಿನಲ್ಲಿ ಪರಿತಪಿಸಿದಂತೆ,
ಇನ್ನೂ ಹೇಗೋ ಹೇಗೋ ಅಹಿತವಾದಂತೆ,
ಅಂತೂ ಮೂಕ ಕಂಡ ಕನಸಿನಂತೆ – ಅವರ್ಣನೀಯ!

ಆದಾರೋ ಕೆನ್ನೆಗೆ ಬಾರಿಸಿದಂತೆ, ನಾನು ಪ್ರತಿಭಟಿಸಲಾರದೆ
ಗೋಗರೆದಂತೆ; ಎತ್ತರದ ಸ್ಥಳದಿಂದ ಒಮ್ಮೆಗೇ
ಬಿದ್ದಂತೆ; ........
ಯಾವುದನ್ನು ಬಯಸಲಿಲ್ಲವೋ,
ಅವೆಲ್ಲಾ ಸಾಲಾಗಿ ಬಂದಂತೆ
ಹೀಗೆ ಏನೇನೋ ಕನಸು ನನಸಿನಲ್ಲೂ,
"ಸಂಕಟಬಂದಾಗ ವೆಂಕಟರಮಣ'' ಎನ್ನದ;
ಸಂತಸ್ತನಾದಾಗಲೂ, "ಸಪ್ತಗಿರಿಗೊಡೆಯ" ಎನ್ನದ;
ತಿರುಪೆ ಎತ್ತುವಾಗಲೂ, "ತಿರುಪತಿವಾಸ'' ಎನ್ನದ
ನನ್ನ ಎಚ್ಚತ್ತ ಮನಸ್ಸು; ಅದೆಂತು ಕನಸಿನಲ್ಲಿ
ನಿನ್ನ ನೆನೆವುದು? ನಿನ್ನಡಿಗಳ ಕಾಂಬುದು?

ವೆಂಕಟರಮಣ! "ಸ್ವಪ್ನೇऽಪಿ ನೋ ಸಂಗಮಃ'' ಎಂದು
ಅಲಂಕಾರಶಾಸ್ತ್ರದಲ್ಲೋದಿದ ವಿರಹಕಾತರಳ ಒಂದು ನುಡಿ
ಇದೀಗ ತಾನೇ ಮನಃ ಪಟಲದಲ್ಲಿ ಮೂಡಿ
ಮಾಯವಾಯಿತು!

ಪ್ರಭೋ! ಕನಸಿನಲ್ಲಾದರೂ ಒಮ್ಮೆ ನಿನ್ನ ಶ್ರೀರೂಪವನ್ನು
ಈ ಹುಲುಮಾನವನಿಗೆ ತೋರುವ ಕೃಪೆ ಮಾಡೆಯಾ?
ಕೃಪಾಸಿಂಧು!

**ಶ್ರೀ ಕೆ. ಸುಬ್ರಹ್ಮಣ್ಯ ಭಟ್ಟ** ಎಂ.ಎ.ಬಿ.ಎಡ್.

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯುವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರ ದಲ್ಲಿ ನೇಮಿಸುವಿಕೆ:

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯುವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯುವರೆಗೆ ಕೆಲಸಮಾಡುತ್ತದೆ.

# ಪು.ತಿ.ನ. ಅವರು ಚಿತ್ರಿಸಿದ ಅಹಲ್ಯೆ

ಶ್ರೀಮತಿ ಎ. ಎಸ್. ಪಂಕಜ
ಎಂ ಎ, ಬಿ.ಇಡಿ.

ಇಂದ್ರ – ಅಹಲ್ಯೆಯರ ಸಂಗತಿ ಭಾರತೀಯ ಸಾಹಿತ್ಯಕ್ಕೆ ಚಿರಪರಿಚಿತವಾದದ್ದು ಇಂದ್ರನಿಗೆ 'ಅಹಲ್ಯಾಯೈಜಾರಃ' ಎಂಬ ವಿಶೇಷಣ ವೈದಿಕ ವಾಙ್ಮಯದಲ್ಲಿಯೇ ದೊರೆತಿದೆ. ಇವರ ಕಥೆ ಖಚಿತವಾದ ಆಕಾರವನ್ನು ತಾಳಿ ಮೊದಲು ಕಾಣಿಸಿಕೊಳ್ಳುವುದು ವಾಲ್ಮೀಕಿಯ ರಾಮಾಯಣದಲ್ಲಿ. ಇಲ್ಲಿ ಅದು ಕೇವಲ ವ್ಯಾಮೋಹದ ವೃತ್ತಾಂತವಾಗಿ ಮುಗಿದಿಲ್ಲ; ಅಲ್ಲಿಗೆ ನಿಲ್ಲುವುದಾಗಿದ್ದರೆ ಅದಕ್ಕೆ ರಾಮಾಯಣದಲ್ಲಿ ಬಹುಶಃ ಸ್ಥಾನ ಇರುತ್ತಿರಲಿಲ್ಲ. ಶ್ರೀರಾಮನ ದರ್ಶನದಿಂದ ಅಹಲ್ಯೆ ಪರಿಶುದ್ಧಳಾದಳೆಂಬುದೇ ವಾಲ್ಮೀಕಿಗೆ ಮುಖ್ಯವಾದ ವಿಷಯ, ಅದರ ನಿರೂಪಣೆಗೆ ಪೂರ್ವಭಾವಿಯಾಗಿ ಈ ಕಾಮುಕಥೆಯನ್ನು ಅದರ ಫಲವಾಗಿ ಒದಗಿದ ಶಾಪವಿಚಾರವನ್ನೂ ಅವನು ಹೇಳಬೇಕಾಯಿತು. ಅಹಲ್ಯೋಪಾಖ್ಯಾನವು ನಮ್ಮ ಪೌರಾಣಿಕ ಕಥೆಗಳ ರಾಶಿಯಲ್ಲಿ ಎಲ್ಲೋ ಒಂದು ಮೂಲೆಯಲ್ಲಿ ಮರೆಯಾಗದೆ ವಿಶೇಷ ಪ್ರಸಿದ್ಧಿ ಹೊಂದಿದ್ದಕ್ಕೆ ಅದು ರಾಮನ ಮಹಿಮೆಗೆ ನಿದರ್ಶನವಾಗಿ ಬಂದದ್ದೇ ಕಾರಣವೆನ್ನಬಹುದು.

ಇಂದ್ರನು ಅಹಲ್ಯೆಯನ್ನು ಏಕೆ ಕಾಮಿಸಿದನೆಂಬುದನ್ನೂ ಅವನ ಮೋಹಕ್ಕೆ ಅವಳು ಹೇಗೆ ಒಳಗಾದಳೆಂಬುದನ್ನೂ ವಾಲ್ಮೀಕಿ ವಿಸ್ತರಿಸಿಲ್ಲ. ಆದರೂ ವಾಲ್ಮೀಕಿ ಒಂದೆರಡು ವಾಕ್ಯಗಳಲ್ಲಿಯೇ ಅವಳ ಮನೋಭಾವವನ್ನು ತಿಳಿಸಿದ್ದಾನೆ. ಮುನಿವೇಷದಲ್ಲಿ ಇಂದ್ರನು ಬಂದು ಅಹಲ್ಯೆಯ ಸಹವಾಸವನ್ನು ಕೋರಿದನು. ಅವನು ವೇಷಧಾರಿಯೆಂಬುದನ್ನು ಅರಿತೂ ಅವಳು ಒಪ್ಪಿದಳು 'ಮತಿಂ ಚಕಾರ ದುರ್ಮೇಧಾ ದೇವರಾಜ ಕುತೂಹಲಾತ್' ಎಂದು ಒಂದು ಮಾತಿನಲ್ಲಿ ಅವಳ ಮನೋಭಾವವನ್ನು ವಾಲ್ಮೀಕಿ ಸೂಚಿಸುತ್ತಾನೆ. ಕಾಮಿಗಳಿಬ್ಬರ ಆಶೆಯೂ ಈಡೇರಿತು. ಇಲ್ಲಿಂದ ಬೇಗ ಹೊರಟು ಹೋಗೆಂದು ಅಹಲ್ಯೆ ಈ ಸುರಶ್ರೇಷ್ಠನಿಗೆ ಎಚ್ಚರ ಕೊಟ್ಟಳು. ಗೌತಮನು ಬಂದುಬಿಟ್ಟಾನೆಂದು ಇಂದ್ರನೂ ಅಳುಕುತ್ತಾ ಆಶ್ರಮದಿಂದ ಹೊರಬಿದ್ದನು. ಅಂದರೆ ತಪೋನಿಧಿ ಗೌತಮನು ತೀರ್ಥೋದಕದಲ್ಲಿ ಮಿಂದು, ದರ್ಭೆ ಸಮಿತ್ತುಗಳನ್ನು ಕೈಯಲ್ಲಿ ಹಿಡಿದು, ಬೆಂಕಿಯಂತೆ ಬೆಳಗುತ್ತಾ ಎದುರಿಗೆ ಬಂದೇ ಬಿಟ್ಟನು. ಆತನನ್ನು ನೋಡಿ ಇಂದ್ರನು ಬೆದರಿದನು ಅವನ ಮುಖ ಬಣ್ಣಗುಂದಿತು. ತನ್ನ ವೇಷವನ್ನು ತಾಳಿದ್ದ ಈ ವಂಚಕವನ್ನು ಕಂಡು ಗೌತಮನು ರೋಷದಿಂದ, 'ನೀನು ವಿಫಲ'ನಾಗೆಂದು ಶಪಿಸಿದನು. ಬಳಿಕ ಅಹಲ್ಯೆಯನ್ನು ಕುರಿತು –

"ಇಹ ವರ್ಷ ಸಹಸ್ರಾಣಿ ಬಹೂನಿ
ತ್ವಂ ನಿವತ್ಸ್ಯಸಿ
ವಾಯು ಭಕ್ಷಾನಿರಾಹಾರ ತಪ್ಯಂತೀ
ಭಸ್ಮಶಾಯಿನೀ
ಅದೃಶ್ಯಾ ಸರ್ವ ಭೂತಾನಾಮಾಶ್ರ
ಮೇsಸ್ಮಿನ್ ನಿವತ್ಸ್ಯಸಿ
ಯದಾ ಚೈತದ್ವನಂ ಘೋರಂ
ರಾಮೋ ದಶರಥಾತ್ಮಜಃ
ಆಗಮಿಷ್ಯತಿ ದುರ್ಧರ್ಷಸ್ತದಾ
ಪೂತಾ ಭವಿಷ್ಯಸಿ
ತಸ್ಯಾತಿಥ್ಯೇನ ದುರ್ವೃತ್ತೇ
ಲೋಭ ಮೋಹ ವಿವರ್ಜಿತಾ
ಮತ್ಸಕಾಶೇ ಮುದಾಯುಕ್ತಾ
ಸ್ವಂ ವಪುರ್ಧಾರಯಿಷ್ಯಸಿ"

ಹೀಗೆ ಶಾಪವನ್ನು ಅದರ ಪರಿಹಾರವನ್ನೂ ಒಂದೇ ಉಸಿರಿನಲ್ಲಿ ಹೇಳಿ ಆಶ್ರಮವನ್ನು ಬಿಟ್ಟು, ಹಿಮವತ್ಪರ್ವತದಲ್ಲಿ ತಪಸ್ಸು ಮಾಡುತ್ತಾ ನಿಂತನು.

ಇಷ್ಟನ್ನು ಕೇಳಿದ ಬಳಿಕ, ಇಂದ್ರನಿಗೆ ಶಾಪವಿಮೋಚನೆ ಹೇಗಾಯಿತೆಂಬುದನ್ನು ಸಂಗ್ರಹವಾಗಿ ರಾಮನು ಕೇಳಿ ಅಹಲ್ಯೆಯ ಉದ್ಧಾರಕ್ಕಾಗಿ ವಿಶ್ವಾಮಿತ್ರ ಲಕ್ಷ್ಮಣರೊಂದಿಗೆ ಆಶ್ರಮವನ್ನು ಪ್ರವೇಶಿಸುತ್ತಾನೆ. ಅದುವರೆಗೂ ಅದೃಶ್ಯಳಾಗಿದ್ದ ಅಹಲ್ಯೆ ರಾಮನ ದರ್ಶನದಿಂದ ಶಾಪವಿಮುಕ್ತಳಾಗಿ ಎಲ್ಲರ ಕಣ್ಣಿಗೂ ಕಾಣಿಸುತ್ತಾಳೆ. ದೇವದುಂದುಭಿ ಮೊಳಗುತ್ತದೆ; ಹೂವಿನ ಮಳೆ ಕರೆಯುತ್ತದೆ ಗೌತಮನು ಪರಿಶುದ್ಧೆಯಾದ ಅಹಲ್ಯೆಯೊಡಗೂಡಿ ಸುಖಿಯಾಗುತ್ತಾನೆ. ಅವನಿಂದ ಅತಿಶಯವಾದ ಪೂಜೆಯನ್ನು ಸ್ವೀಕರಿಸಿ ರಾಮನು ಮಿಥಿಲೆಗೆ ತೆರಳುತ್ತಾನೆ

ಹೀಗೆ ವಾಲ್ಮೀಕಿ ನಾಲ್ಕು ಮಾತುಗಳಲ್ಲಿ ರೇಖಿಸಿ ಕೈಬಿಟ್ಟ ಪ್ರಸಂಗ ವಾಚಕರ ಕುತೂಹಲವನ್ನು ಕೆರಳಿಸದೆ ಬಿಡುವುದಿಲ್ಲ. ಅಹಲ್ಯೆ, ಇಂದ್ರ, ಗೌತಮ ಈ ಮೊದಲಾದವರ ನಡವಳಿಕೆಯ ರೀತಿಯೇನು? ಅರ್ಥವೇನು? ಇವರನ್ನು ಉದ್ರೇಕಿಸಿದ ಭಾವಗಳೇನು? ಇವರ ಕಥೆಯಲ್ಲಿ ಅಡಕವಾಗಿರುವ ಸಮಸ್ಯೆಯೇನು – ಈ ಪ್ರಶ್ನೆಗಳು ಮನಸ್ಸನ್ನು ಕೆಲವು ಕಾಲವಾದರೂ ಬಾಧಿಸುತ್ತವೆ. ಈ ಪ್ರಶ್ನೆಗಳಿಗೆಲ್ಲಾ ಉತ್ತರವನ್ನು ನಾವು ಪು ತಿ ನ. ರವರ 'ಅಹಲ್ಯೆ' ಗೀತರೂಪಕದಲ್ಲಿ ಕಂಡು ಕೊಳ್ಳಬಹುದು.

" ಅಹಲ್ಯೆ " ಗೀತನಾಟಕದ ಕಥಾವಸ್ತುವಿನಲ್ಲಿ 'ಧರ್ಮ ಮತ್ತು ಬಯಕೆಗಳ ತುಮುಲ' ಹೋರಾಟಗಳನ್ನು ಕವಿ ಅತ್ಯಂತ ಅರ್ಥಪೂರ್ಣವಾಗಿ ತಂದಿದ್ದಾರೆ. ಇಂದ್ರ, ಅಹಲ್ಯೆ, ಗೌತಮ ಈ ಮೂವರೂ ಇಲ್ಲಿ ಮುಖ್ಯಪಾತ್ರಧಾರಿಗಳಾಗುತ್ತಾರೆ. ಕಾಮ ಈ ಮೂವರ ಸುತ್ತ ತನ್ನ ಪ್ರಭಾವವನ್ನು ಬೀರುತ್ತಾನೆ. ಇಂದ್ರ, ಗೌತಮ, ಅಹಲ್ಯೆ – ಈ ಮೂವರ ಜೀವನವೂ ತ್ರಿಕೋನವಾದರೆ ಕಾಮ ಮೂವರ ಜೀವನಲ್ಲಿಯೂ ವೃತ್ತದಂತೆ ಸುತ್ತಿಕೊಂಡು ಬರುತ್ತಾನೆ.

ಪ್ರಥಮಾಂಕದಲ್ಲಿ ಇಂದ್ರ ಅಹಲ್ಯೆಯರ ಪಾತ್ರ ಚಿತ್ರಿತವಾಗಿದ್ದರೆ, ಮಧ್ಯಮಾಂಕದಲ್ಲಿ ಇಂದ್ರ ಹಾಗೂ ಗೌತಮರ ಪಾತ್ರ ಚಿತ್ರಣವಿದೆ. ಉತ್ತರಾಂಕದಲ್ಲಿ ಗೌತಮ ಅಹಲ್ಯೆಯರ ಜೀವನದ ಸಮಮಿಳಿತವನ್ನು ಕಾಣುತ್ತೇವೆ. ಕಾಮ ಈ ಮೂರು ಕೋನದೊಳಗೂ ಹರಡಿರುತ್ತಾನೆ. ಹೀಗೆ ಒಂದೊಂದು ಕೋನದ ನಿಯತಿಯಲ್ಲಿ ಒಬ್ಬೊಬ್ಬರೂ ನಿಲ್ಲುತ್ತಾರೆ, ಧರ್ಮಾಧರ್ಮದ ಅರಿವಿದ್ದು ಕಾಮನ ಪ್ರಭಾವದಿಂದ ಸೋತು ಪತನದ ಹಾದಿಯನ್ನು ತುಳಿಯುತ್ತಾರೆ. ಇಂದ್ರನಿಗೆ ಇದ್ದ ಒಡೆತನದ ಹುಚ್ಚು ಪದವಿಯ ಭೋಗದ ಐಸಿರಿ. ಅವುಗಳ ಮದ, ಸುರರ ನರ್ತನಗಳಿಂದ ವ್ಯಕ್ತವಾಗುತ್ತದೆ. ರೂಪಕದ ಪ್ರಾರಂಭದಲ್ಲಿಯೇ ಅವನ ವೈಭವದ ಅಟ್ಟಹಾಸ ರಂಗವನ್ನೇ ಪ್ರತಿಧ್ವನಿಸುತ್ತದೆ. ಆತ ಪುಷ್ಕರನೊಡನೆ ಭೂಮಿಗೆ ಬಂದಾಗ ಆತನ ಸಾತ್ವಿಕ ಪ್ರವೃತ್ತಿ ವ್ಯಕ್ತವಾಗುತ್ತದೆ. ಎರಡನೆಯ ಘಟದಲ್ಲಿ ರಂಭೆಯ ಪರಿಭವವನ್ನು ಕೇಳಿದ ಇಂದ್ರನ ಪ್ರವೃತ್ತಿ ಕ್ರಮೇಣ ರಾಜಸಿಕ ಮಟ್ಟಕ್ಕೆ ಜಾರುವುದು ಕಂಡು ಬರುವುದು. ಮೂರನೆಯ ಘಟ್ಟದಲ್ಲಿ ಕಾಮನ ಪೂವಿಲ್ ದನಿಯನ್ನು ಕೇಳುತ್ತಲೇ ಅವನ ತಾಮಸ ಪ್ರವೃತ್ತಿ ತಲೆ ಎತ್ತುತ್ತದೆ. ಆಗ ಅಹಲ್ಯೆಯನ್ನು ನಿಟ್ಟಿಸುತ್ತಾನೆ. ಗೌತಮನ ತಪಸ್ಸನ್ನು ಮನ್ಮಥನ ಮೂಲಕ ಕೆಡಿಸ

ಬೇಕೆಂದು ಭೂಮಿಗೆ ಬಂದು ತಾನೆ ಆತನ ಸತಿ ಅಹಲ್ಯೆಯ ಚೆಲ್ವಿಕೆಗೆ ಮೈಮರೆಯುತ್ತಾನೆ. ಪರ ಸತಿಯಲ್ಲಿ ಕುತೂಹಲ ತನಗೆ ತರವಲ್ಲವೆಂದು ಮನಸ್ಸನ್ನು ತಡೆಹಿಡಿದರೂ, ಅದಮ್ಯವಾದ ಅವನ ಬಯಕೆ ನೀತಿಯನ್ನು ಮೆಟ್ಟಿನಿಲ್ಲುತ್ತದೆ. "ಕುತೂಹಲವು ಆಸಕ್ತಿಯಾಗುತ್ತದೆ ಆಸೆ, ಚಿಂತೆ, ಈರ್ಷ್ಯೆ, ವಿಷಾದ ಮೊದಲಾದ ಪ್ರೇಮಾನುಭವದ ಹಲವು ಮೆಟ್ಟಲುಗಳನ್ನು ಅವನು ಏರುತ್ತಾನೆ". ದೇವೇಂದ್ರನಾಗಿ ಸಕಲ ಭೋಗಗಳನ್ನು ಅನುಭವಿಸಿದ್ದರೂ ಅವೆಲ್ಲಾ ಇದರ ಮುಂದೆ ನಿಷ್ಪ್ರಯೋಜಕ ಎನಿಸುತ್ತವೆ ; ಆತ ತನ್ನ ಸ್ಥಾನಮಾನವೆಲ್ಲವನ್ನೂ ಆಕೆಗಾಗಿ ತೊರೆಬಿಡಲು ಉದ್ಯುಕ್ತನಾಗುತ್ತಾನೆ. ತನ್ನ ಸಂಪದ ಸೂರೆಯಾದರೂ ತನಗೆ ಚಿಂತೆಯಿಲ್ಲ, ಆಕೆ ತನ್ನವಳಾಗಬೇಕು ಎಂದು ಕಾಮನೊಡನೆ ಆತ ಹೇಳುವಲ್ಲಿ ಅವನ ಉನ್ಮತ್ತ ಕಾಮವಾಂಛೆ ವ್ಯಕ್ತವಾಗುತ್ತದೆ. ಈ ತಾಮಸ ವ್ಯಕ್ತಿತ್ವವೇ ಆತನನ್ನು ಶಾಪಗ್ರಸ್ತನನ್ನಾಗಿಸುತ್ತದೆ.

'ಅಹಲ್ಯೆ' ರೂಪಕದ ಹಿನ್ನೆಲೆಯಾಗಿ ಬರುವ ಮತ್ತೊಂದು ಪಾತ್ರವೆಂದರೆ ಗೌತಮನದು. ಸ್ವರ್ಗ ಮರ್ತ್ಯಗಳಿಗೆ ಸಂಬಂಧಿಸಿದ ಈ ಕಥಾವೃಕ್ಷದಲ್ಲಿ ಸಗ್ಗದೊಡೆಯನಾದ ಇಂದ್ರ ತುದಿಯಾದರೆ ಗೌತಮ ಬುಡವಾಗುತ್ತಾನೆ. ಬುಡದಿಂದ ತುದಿಯವರೆಗೆ ವ್ಯಾಪಿಸಿರುವುದು ಅಹಲ್ಯೆ ಮತ್ತು ಮನ್ಮಥ – ಧರ್ಮ ಮತ್ತು ಬಯಕೆ. ಗೌತಮ ತನ್ನ ತಪಸ್ಸಿನ ಬಲದಿಂದ ಮೂರು ಲೋಕವನ್ನು ಆಳಿಸಬಲ್ಲ ಅಥವಾ ಉಳಿಸಬಲ್ಲವನಾಗಿದ್ದರೂ ಪ್ರೇಮಕೃಪಣ, ಸರಸತ್ಯಾಗಿ, ದೇವಪ್ರಿಯನಾಗಿರುತ್ತಾನೆ. ಇತ್ತ ಅಹಲ್ಯೆಯಾದರೋ ತಾರುಣ್ಯದ ಮತ್ತು ಅನುರಾಗದ ಹೊಂಬಿಸಿಲನ್ನು ಆದೀಗ ತಾನೇ ಕಂಡು ಇನ್ನೂ ಆಸೆ ಆರಿರದಂತಹ ಸ್ತರದಲ್ಲಿರುವವಳು. ಹೀಗಾಗಿ ಪತಿಯ ಪ್ರೇಮದೂರತೆ, ಅನಾಸಕ್ತಿ, ಶುಷ್ಕನಿಯಮಗಳು ಅವಳಿಗೆ ಅಸಹನೀಯವಾಗುತ್ತವೆ. ಗೌತಮ ನಂಬಿದ ಧರ್ಮ ಆಕೆಗೆ ಯಾವ ಅರ್ಥವನ್ನೂ ತರದೆ ಅರ್ಥಹೀನವಾಗುತ್ತದೆ. ಆಕೆ ಪತಿ ತಪೋನಿರತನಾಗಿರುವಾಗ ಅವನಲ್ಲಿಗೆ ಬರುವ ಇವಳ ವರ್ಣನೆ ಅವಳ ಮಾನಸಿಕ ಸ್ಥಿತಿಗತಿಗಳನ್ನು ಬಿಂಬಿಸುತ್ತದೆ. ಗುಡುಗು ಮಿಂಚುಗಳು ಅವಳ ಮನಸ್ಸಿನ ತುಮುಲ, ತಲ್ಲಣ, ಭಯ, ಉನ್ಮಾದ ಸ್ಥಿತಿಯನ್ನು ಸೂಚ್ಯವಾಗಿಸಿದರೆ, ಕಪ್ಪಿಡಿದಿರುವ ಬಾನು ಅವಳ ಅತೃಪ್ತ ಜೀವನಕ್ಕೆ ಸಂಕೇತವಾಗುತ್ತದೆ. ಆಕೆ ಮಾಧವಿಯೊಡನೆ ಹೇಳುವ –

ನೋಡಲೆ ಮಾಧವಿ, ಮೇಗಡೆ
ಕಪ್ಪಿಡಿದಿದೆ ಬಾನು ;
ಮಳೆ ಮುಗಿಲುರವಣಿಸುತ್ತಿದೆ,
ತೋರಿದೆ ಶಕ್ರಧನು ;
ಮಿಂಚಿನಕೆಂಚುರಿ ನಾಲಿಗೆ
ನಮ್ಮನೆ ನೊಣೆವಂತೆ
ತಹತಹಿಸಿದೆ ಗುಡುಗಾಗಿದೆ
ನಮ್ಮನೆ ನಗುವಂತೆ

– ಎನ್ನುವ ಮಾತುಗಳು ಅವಳ ಉದ್ವಿಗ್ನವಾದ ಮನಸ್ಸಿನ ಪರಿಚಯ ಮಾಡಿಕೊಡುತ್ತಲೇ ಮುಂದಿನ ಕರಾಳ ಸನ್ನಿವೇಶಗಳಿಗೆ ಭವಿಷ್ಯ ನುಡಿಯುತ್ತವೆ. ಅಷ್ಟೇ ಅಲ್ಲದೆ ಪ್ರಕೃತಿ ಮತ್ತು ಮಾನವರಿಬ್ಬರಿಗೂ ಇರುವ ಒಂದು ಅವ್ಯಕ್ತವಾದ ಸಂಬಂಧವನ್ನು ಪ್ರಕಾಶಿಸುತ್ತವೆ.

ಪತಿಯ ಅನಾಸಕ್ತಿ, ದಿಗಿಲು ಮಾಡಿದ ವಾತಾವರಣ, ಅತೃಪ್ತವಾದ ಜೀವನ, ಅಲ್ಲದೆ ಮನದಲ್ಲಿ ಕುಣಿಯುತ್ತಿದ್ದ ಭಯಂಕರ ಬಯಕೆ, ಏಕಾಂಗಿತನ ಇವುಗಳಿಗೆಲ್ಲಾ ಇಂದ್ರ ಹಕ್ಕುದಾರನಾಗಿರುತ್ತಾನೆ. ಹೃದಯದ ಹಂಬಲ ಬಯಕೆಯುಕರೆ ಇಂದ್ರನ ಆಸಕ್ತಿ ಅವಳನ್ನು ವಂಚಿಸುತ್ತವೆ. ಜೊತೆಗೆ ಇಂದ್ರನಲ್ಲಿ ಆಕೆಗಿದ್ದ ಭಯ, ಗೌರವ ಭಾವನೆಗಳು ಅವಳು ತನ್ನನ್ನೇ ಸಂಪೂರ್ಣವಾಗಿ ಅವನಿಗೆ ಅರ್ಪಿಸಿಕೊಳ್ಳಲು ಇಂಬಾಗುತ್ತವೆ.

ಇಂದ್ರನ ಮಾತಿನಂತೆ ಬಂದ ಮದನ ತನ್ನ ಪೂವಿಲ್‌ಅನ್ನು ಗೌತಮನತ್ತ ಹೂಡುತ್ತಾನೆ ಅದು ಅವನನ್ನು ತಾಕಿ, ಮರೆಯಲ್ಲಿ ನಿಂತಿದ್ದ ಇಂದ್ರನನ್ನು ಸ್ಪರ್ಶಿಸುತ್ತದೆ. ಇಂದ್ರನನ್ನು ಮುಟ್ಟಿದ್ದೇ ಪ್ರಮಾದವಾಗುತ್ತದೆ. ನೂರು ಆಸೆಗಳಿಗೆ ಅಹಲ್ಯೆಯ ಹೃದಯ ಹೆದ್ದಾರಿಯಾಗಿರುವಾಗ ಇಂದ್ರನು ತಾನೇ ಪ್ರೇಮಭಿಕ್ಷೆಯನ್ನು ಬೇಡಿ ಬರುತ್ತಾನೆ. ಆದರೂ ಆ ಮನಸ್ಸಿನ ಸಂಗಡ ಅವಳು ಹೋರಾಡದೆ, ಒಮ್ಮೆಯೇ ಬಿದ್ದವಳಲ್ಲ. ಎದುರಿಗೆ ನಿಂತವನು ತನ್ನ ಪತಿಯೆಂದು ಮೊದಲು ಭಾವಿಸಿ ಸಡಗರ ಪಡುತ್ತಾಳೆ; ಮಾಯಾವಿಯೆಂದು ಬೇಗನೆ ಅರಿತು, ಬೆಚ್ಚಿ ಹಿಮ್ಮೆಟ್ಟುತ್ತಾಳೆ. ಆ ಬಳಿಕ, ತನ್ನ ಹೆಬ್ಬಯಕೆಯ ಇಂದ್ರನೇ ಇವನೆಂದು ಗೊತ್ತಾದಾಗಲೂ ನಿವಾರಿಸುವಷ್ಟು ವಿವೇಕ ಅವಳಿಗುಂಟು. 'ನನ್ನ ಹೃದಯಮರ್ಮವನ್ನು ಹಿಡಿದು ಆಡಬೇಡ ನನ್ನ ಆಸೆಯನ್ನು ಕೆರಳಿಸಬೇಡ'–ಎಂದು ಅವನನ್ನು ಬೇಡಿಕೊಳ್ಳುವಳು ಇಂದ್ರನು ಒಡ್ಡಿದ ಪ್ರಲೋಭನವು ತನ್ನ ಜೀವಸಾರವನ್ನೇ ಸೆಳೆಯುತ್ತಿದ್ದರೂ ತಡೆದು ನಿಲ್ಲುವಳು. ಆದರೆ ಇಂದ್ರನು ಅವಳ ಅಶರಣ ಸ್ಥಿತಿಯನ್ನು ಬಲ್ಲನು ಅವನ ಮನಸ್ಸಿನಲ್ಲಿ ಧರ್ಮಾಧರ್ಮಗಳ ಹೋರಾಟ ಯಾವುದೂ ಇಲ್ಲ. "ಮೊದಲಿಳೆಯ ಮಡದಿಯರು ಸಲುವರಮರರಿಗೆ" ಎಂಬುದೇ ಅವನ ತತ್ತ್ವ. ತಾನು ಕೊಂಚ ಕಾಲ ಮರೆಯಾದರೆ ಅಹಲ್ಯೆಯ ಮನೋನಿಗ್ರಹ ಸಡಿಲಗೊಳ್ಳುವುದು ಎಂದು ನಿರೀಕ್ಷಿಸಿ ಅದೃಶ್ಯನಾಗವನು. ಈಗ ಅಹಲ್ಯೆಯುಗೆ ಕಳವಳ ಮೊದಲಾಗುತ್ತದೆ. ಇಂದ್ರನ ಮಾಟದಿಂದ ಗಾಳಿ ದನಿಗಳು "ಮರುಳ ಹೆಣ್ಣೆ ಏನಗೈದೆ" ಎಂದು ಹಂಗಿಸುತ್ತವೆ. ಅವಳ ಹೃದಯದ ದನಿಯೂ ಇದೇ ಇನ್ನು ಅವಳು ತಡೆದಿರಲಾರಳು. ಆಸೆಗೆ ಮುಡಿಪಾಗಿ ತನ್ನ ಸರ್ವಸ್ವವನ್ನೂ ಒಪ್ಪಿಸುವಳು. ಇಂದ್ರನ ಭುಜತಲ್ಪದಲ್ಲಿ ಸುರಪಥ ವಿಹಾರದಲ್ಲಿ ಎಲ್ಲಕ್ಕೂ ಮೀರಿ ಎಲ್ಲವನ್ನೂ ಮುಳಗಿಸುವ ಅನುರಾಗರಸವನ್ನು ಕೊಂಚಹೊತ್ತು ಅನುಭವಿಸುವಳು. ಆದರೆ ಮೋಹದ ಬಿರುಗಾಳಿಗೆ ಸಿಕ್ಕಿದ ಈ ತರಗೆಲೆಯು ಮೋದ ಎಷ್ಟುಕಾಲ ಇದ್ದೀತು, ಸುಖದ ಹಂಬಲ ವೇನು ಹಿರಿದು ಬಳಿಕ ನಿಲ್ಲುವುದು ಏನು? –

"ಮುಟ್ಟಲೊಡನೆ ನೀರ ಹೊಳೆಗುಳ್ಳೆಯಂತೆ
ಮೋದವೆಂತಾಯಿಹು; ಅದೆ ವಿಭ್ರಾಂತಿ"

ಹೀಗೆಂದು ಅಹಲ್ಯೆಗೆ ಜ್ಞಾನೋದಯವಾಗುತ್ತದೆ. ಇದರ ಮೇಲೆ, ಅವಳದು ಧರ್ಮಬಾಹಿರವಾದ ಸುಖ. ಈ ನಲವಿನ ನಡುವೆಯೇ, ಮುನಿ ಗೌತಮನ ಕಂಡರೆ ನನ್ನ ಗತಿಯೇನು? ಎಂಬ ಭೀತಿ ಅವಳ ಎದೆಯೊಳಗೆ ಬಲಿಯುತ್ತದೆ.

ಈ ಕಡೆ ಗೌತಮನ ಧ್ಯಾನದ ಏಕಾಗ್ರತೆಯನ್ನು ಕಂಬನಿ ತುಂಬಿದ ಸತಿಯ ಚಿತ್ರ ಕಲಕುತ್ತದೆ ಹಿಮಗಿರಿಯ ಏಕಾಂತದ ತಪಸ್ಸಿನಿಂದ ಗೌತಮನಿಗೆ ಸತ್ಯ ಕಾಣಿಸಿತು. ಅದು ಬ್ರಹ್ಮವಲ್ಲ. ಕಾಮದ ಅನಂತರದ ಪ್ರೇಮದ ದರ್ಶನ. ಅನಂತರ ನಿದ್ದೆಯಿಂದ ಎದ್ದು ಬಂದವನಂತೆ ಗೌತಮ ಗುಹೆಯಿಂದ ಹೊರಬರುತ್ತಾನೆ. ಅವನ ಬಾಯಿಂದ ಅವನ ತಪಸ್ಸಿನ ಫಲವಾದ ಅನುಭೂತಿ ಹೊರಬರುತ್ತದೆ. "ರಾಗದ ಹಂಬಲವೂ ಇರವೇ–ಅಂತೆಯೆ ತ್ಯಾಗದ ಹಂಬಲವೂ ಇರವೇ …… ರಾಗದಿ ತುಸು ನಡೆ ತ್ಯಾಗದಿ ತುಸು ನಡೆ"

ಅಹಲ್ಯೆ ತಾನಾಗಿಯೇ ಬಂದು ಅನುನಯಿಸಿದಾಗ ಅವನ ಧ್ಯಾನ ಸಡಿಲಲಿಲ್ಲ ; ಕಾಮನ ಹಾಡನ್ನು ಕೇಳಿದಾಗ ಅದು ಭಂಗವಾಯಿತು. ಈ ತಪಸ್ಸೆಲ್ಲ ಅಸಾರವೆನಿಸಿತು; ಒಳಗೆ ಅದುಮಿದ್ದ ವಿಷಯಾಸಕ್ತಿ ಮೇಲಕ್ಕೆ ಚಿಮ್ಮಿ ನಲ್ಮೆಯ ಕಡೆಗೆ ಮನಸ್ಸು ಹೊರಳಿತು. ಇಂದ್ರಾಣಿಯನ್ನು ಇಂದ್ರನು ಒಲಿಸುವಂತೆ ತಾನೂ ತನ್ನ ನಲ್ಮೆಯನ್ನು ಒಲಿಸಬೇಕೆಂದು ವ್ರತದ ಅವಧಿ ಮುಗಿಯುವ ಮೊದಲೇ ಅವನು ಬರುತ್ತಾನೆ. ಆದರೆ ಗಳಿಗೆ ಆಗಲೇ ಮಿಂಚಿಹೋಗಿತ್ತು. ಅಹಲ್ಯೆಯೊಂದಿಗೆ ತಾನು ಮೊದಲು ಪ್ರೇಮವನ್ನು ಬೆಳಸಿದ ಚಪ್ಪರಕ್ಕೆ ಗೌತಮನು ಅವಳನ್ನು ಹುಡುಕಿಕೊಂಡು ಬಂದರೆ, ಅಲ್ಲಿ ಕಾಣುವುದು ಏನು? ಬೇರೊಬ್ಬನೊಂದಿಗೆ ಅವಳ ಸಲಿಗೆ ; ಗೌತಮನು

ಬಂದದ್ದು ತನ್ನ ಸತಿಯನ್ನು ತಣಿಸುವುದಕಾಗಲಿಲ್ಲ. ಶಪಿಸುವುದಕ್ಕಾಯಿತು.

ನಿನ್ನವಳಾಂ ಇನ್ನಿಲಾಂ
ಇಂದಳಿದಳಹಲ್ಯೆ–
ಬಾಳ್ ಮಿಗುವೀ ಅನುರಾಗಕೆ
ಇಗೊ ಮೀಸಲಹಲ್ಯೆ

ಎಂದು ಅಹಲ್ಯೆ ತನ್ನನ್ನು ಇಂದ್ರನಿಗೆ ಸಂಪೂರ್ಣ ಅರ್ಪಿಸಿಕೊಂಡಿರುತ್ತಾಳೆ. ಇದನ್ನು ಕಂಡ ಗೌತಮ ರೋಷಾವೇಷದಲ್ಲಿ, ಕಾಮದ ತೀಕ್ಷ್ಣ ಬಯಕೆಯಲ್ಲಿ, ಅಲ್ಲಿ ವ್ರತಗೆಟ್ಟವನು ಇಲ್ಲಿ ಮತಿಗೆಟ್ಟು, ದೋಷಿಗಳಿಬ್ಬರಿಗೂ ಘೋರ ಶಾಪವನ್ನಿತ್ತನು ಬಳಿಕ ತನ್ನ ಆವೇಶಕ್ಕೆ ತಾನೇ ಸಂತಾಪಗೊಂಡು ಮನಸ್ಸಿನ ಎಲ್ಲ ಬೇಗೆಯನ್ನು ತಂಪುಗೊಳಿಸಲು ಹಿಮಾಚಲದ ಏಕಾಂತದೆಡೆಗೆ ನಡೆದನು.

ಪು. ತಿ. ನ ರವರ ಈ ಗೀತರೂಪದಲ್ಲಿ ಅಹಲ್ಯೆ ಬಿದ್ದ ಕಥೆ ಮಾತ್ರವಲ್ಲ; ಮತ್ತು ಎದ್ದ ಕಥೆಯೂ ಹೌದು ತನ್ನ ಹೃದಯದಲ್ಲೇ ಉರಿದಿದ್ದ ಅನುತಾಪದೊಂದಿಗೆ ಗಂಡನ ಶಾಪವೂ ಬೆರೆತು – ತನ್ನ ಪಾಪಕರ್ಮವನ್ನು ಕಂಡ ಆಶ್ರಮದಲ್ಲೇ ಅಹಲ್ಯೆ ಗಾಳಿಯೊಂದಿಗೆ ಗಾಳಿಯಾಗಿ ಯಾರ ಕಣ್ಣಿಗೂ ಬೀಳದೇ ಅಲೆಯುತ್ತಿರುತ್ತಾಳೆ. 'ಹೂವೆಂದುದೆ ಹಾವಾಯಿತು, ಕಾವುದೆ ನನ್ನ ಕೊಂದಿತು.' ಎಂದು ಹಲುಬುತ್ತಾ, "ವಿಶ್ವಕ್ಕೆ ನಾನು ಏಕಾಕಿನಿ, ಪಾತಕಿ, ಅಸತಿ, ಅನಾತ್ಮೆ, ಭ್ರಷ್ಟೆ, ಹೇಸಿಕೆ ಎಲ್ಲರ ಮನಕೂ", "ಕೊನೆ ಎಂದಿಗೆ ಈ ತಾಪಕೆ" ಎಂದು ಹಂಬಲಿಸುತ್ತಾ ಅಲೆಯುತ್ತಿರುತ್ತಾಳೆ. ವರ್ಷಗಳು ಸಾಗಿದ ಮೇಲೆ, ಪರಿತಾಪದಿಂದ ಅಹಲ್ಯೆಯ ದೋಷ ದಹಿಸಿ ಹೋಗಿ ಅವಳ ಹೃದಯ ನಿರ್ಮಲವಾದ ಮೇಲೆ, ಬಿಡುಗಡೆಯ ಮುಹೂರ್ತ ಒದಗುತ್ತದೆ.

ವಿಶ್ವಾಮಿತ್ರನು ರಾಮ ಲಕ್ಷ್ಮಣರನ್ನು ಸೀತಾ ಸ್ವಯಂವರಕ್ಕಾಗಿ ಮಿಥಿಲೆಗೆ ಕರೆದು ಕೊಂಡು ಹೋಗುವಾಗ, ತಮ್ಮ ದಾರಿಯಲ್ಲಿ ನೇರವಾಗಿಲ್ಲದಿದ್ದರೂ ಈ ಪಾಳುಬಿದ್ದ ಎಲೆವನೆಯ ಕಡೆಗೆ ರಾಮ ಭಾವಪರವಶತೆಯಿಂದ ನುಗ್ಗುತ್ತಾನೆ. ಪಾಪದ ಹೊರೆಯನ್ನು ನೀಗಿ ಮತ್ತೆ ಆಕಾರವನ್ನು ಪಡೆದು ತೇಜೋಮಯಿಯಾದ ಅಹಲ್ಯೆ "ಇದೆ ಕನಸೋ" ಎಂದು ಅಚ್ಚರಿ ಪಡುತ್ತಾ ಕಾಣಿಸಿ ಕೊಳ್ಳುತ್ತಾಳೆ. ಆಕೆಯ ಆವಿರ್ಭಾವವನ್ನು ಕಂಡು ರಾಮನಿಗೂ ಅದೇ ಬೆರಗು; ಅವನೂ "ಇದೆ ಕನಸೋ ಅದೆ ಕನಸೋ" ಎನ್ನುತ್ತಾನೆ. ಹೀಗೆ ಇಬ್ಬರೂ ಒಬ್ಬರನ್ನೊಬ್ಬರು ಸಂದರ್ಶಿಸುವ ಸನ್ನಿವೇಶ ಅತಿ ಮನೋಹರವಾಗಿದೆ. ತಾನು ಸ್ತ್ರೀಯಾದ ತಾಟಕಿಯನ್ನು ಕೊಂದೆನೆಂಬ ರಾಮನ ದುಗುಡ ಇನ್ನೊಬ್ಬ ಸ್ತ್ರೀಯ ಉದ್ಧಾರದಿಂದ ಹರಿಯಿತು.

ಅಹಲ್ಯೆ ವಾಸ್ತವ ಜೀವನಕ್ಕೆ ಮರಳಿದಳು. ಆದರೆ ತನ್ನ ಪತಿ ಸ್ವೀಕರಿಸಿದ ಹೊರತು ತನ್ನ ಕೊಳೆ ತೊಳೆಯಿತೆಂಬ ನೆಚ್ಚಿಕೆ ಅವಳಿಗಿಲ್ಲ. ಈ ಕೊರತೆಯನ್ನು ಕಳೆಯಲು ಹೊತ್ತಿಗೆ ಸರಿಯಾಗಿ ಗೌತಮನು ಪ್ರವೇಶಿಸಿದನು. ಅವನು ಹಿಮಗಿರಿಯಲ್ಲಿ ಶಾಂತಿಯನ್ನು ಸಂಪಾದಿಸಿಕೊಂಡು ಆಗ ತಾನೆ ಹಿಂದಿರುಗಿದ್ದನು. ಈ ಕೊನೆಯ ಅನಿರೀಕ್ಷಿತದಿಂದ ಅಹಲ್ಯೆ ಬೆರಗಾಗಿ ನಿಂತಳು; ಗೌತಮನನ್ನು ಸಮೀಪಿಸಿ ಅವನ ಪಾದದ ಹತ್ತಿರ ಕುಸಿದು ಬಿದ್ದಳು. ನಮ್ಮ ಆಶ್ರಮಕ್ಕೆ ಬಂದಿರುವ ಈ ಮಹಾಪುರುಷನನ್ನು ಸತ್ಕರಿಸಲು ಅಣಿಯಾಗೆಂದು ಸಹಧರ್ಮಚಾರಿಣಿಯನ್ನು ಗೌತಮನು ಎಚ್ಚರಿಸಬೇಕಾಯಿತು. ಅಹಲ್ಯೆಯ ಹೃದಯ ಹಗುರವಾಯಿತು. ಆಗ ಅವಳ ಮನಸ್ಸು ಹೇಗಿತ್ತೆಂಬುದನ್ನು ಅವಳ ಮಾತಿನಲ್ಲೇ ಹೇಳ ಬೇಕು –

ಬಯಸವೆ ನಾ ಗಂಗೆಯ ತೆರ
ಪದದಿ ಕರಗಿ ಹರಿಯೆ,
ಇಲ್ಲದಿರಲು ಹಗುರವಾಗಿ
ಕಂಪಿನಂತೆ ಸರಿಯೆ
ಮೈಯೆ ಭಾರ ಮನವೆ ಭಾರ
ಬದುಕೆ ಭಾರವೆಂಬ
ಆಸರೆಯೇ ಬೇಡದಿಂದದಿ
ನಲವೆ ನನ್ನ ತುಂಬು

ಅಗಲಿದ್ದವರೆಲ್ಲರ – ಸತಿಪತಿಗಳ, ಬಂಧು ಮಿತ್ರರ ಗುರು ಶಿಷ್ಯರ, ಪುನಸ್ಸಮಾಗಮವಾಯಿತು.

ವಾಲ್ಮೀಕಿ ಅಹಲ್ಯೆಯ ವಿಷಯದಲ್ಲಿ ತುಂಬ ಉದಾರಿ, ಮಾನವ ಹೃದಯದ ಬಯಕೆಗಳನ್ನು ಬಲ್ಲ ಕುಶಲ ಆದಿಕವಿ. ಹರೆಯದ ಹೆಣ್ಣನ್ನು ಬಿಟ್ಟು ಪತಿ ಸ್ವರ್ಗವನ್ನು ಬಯಸಬೇಕಾದರೆ ಅಲ್ಲಿ ಇಲ್ಲಿಗಿಂತ ಹೆಚ್ಚಿನ ವೈಭವ ಇರಬೇಕು; ಎಂದು ಕೊಂಡಳು. ಅಂಥ ಸ್ವರ್ಗವನ್ನು ಆಳುವವನು ಎಂಥ ಶಕ್ತಿವಂತ ಎಂಬುದನ್ನು ಕಲ್ಪಿಸಿಕೊಳ್ಳುತ್ತಾ ಕೂರಲು ಬೇಕಾದಷ್ಟು ಸಮಯ ಮನಸ್ಸು ಎರಡೂ ಇರುವವಳು. ಒಂದೇ ಮಾತಿನಲ್ಲಿ ವಾಲ್ಮೀಕಿ ಇದನ್ನು ಸೂಚಿಸಿದ್ದಾನೆ. ಅವಳು ಮುನಿವೇಷದಲ್ಲಿರುವವನು ತನ್ನ ಪತಿಯಲ್ಲ, ಇಂದ್ರ ಎಂದು ತಿಳಿದಾಗಲೂ ಅವನೊಡನೆ ಕೂಡಿದಳು ಏಕೆ–"ದೇವರಾಜ ಕುತೂಹಲಾತ್" ಅದಕ್ಕೆ ಪ್ರತಿಯಾಗಿ ಶಾಪಬಂತು. ಆದರೆ ಶಾಪಮುಕ್ತಳಾದ ಅಹಲ್ಯೆಯನ್ನು ವಾಲ್ಮೀಕಿ ಉಜ್ವಲವಾದ ಮಾತುಗಳಲ್ಲಿ ವರ್ಣಿಸಿದ್ದಾನೆ. ಅಲ್ಲದೆ ಅವಳು 'ಪಾಪಿ' ಎಂಬ ಮಾತನ್ನು ಬಳಸುವುದಿಲ್ಲ 'ಮಹಾಭಾಗ್ಯಶಾಲಿನಿ' ಎನ್ನುತ್ತಾನೆ. ಅವಳು ರಾಮನಿಗೆ ನಮಸ್ಕರಿಸುವುದಿಲ್ಲ. ರಾಮನೇ ಅವಳಿಗೆ ನಮಸ್ಕರಿಸುತ್ತಾನೆ. ಈ ಪ್ರಸಂಗವನ್ನು ವಾಲ್ಮೀಕಿ ನಿರ್ವಹಿಸಿರುವ ರೀತಿ ಆದಿಕವಿಗೆ ಗೌರವ ತರುವಂತಹುದು. ಮುಂದಿನ ಲೇಖಕರಿಗೆ ಬೇಕಾದಷ್ಟು ಸಾಮಗ್ರಿಯನ್ನು ಒದಗಿಸುವ 'ಕವಿ ಭಿಕ್ಷ' ಯನ್ನು ವಾಲ್ಮೀಕಿ ಮಹರ್ಷಿ ಮುಕ್ತ ಹಸ್ತದಿಂದ ನೀಡಿದ್ದಾನೆ.

ಪು. ತಿ. ನ. ಇದನ್ನು ಒಳ್ಳೆಯ ಕವಿಯಂತೆ, ಮಾನವ ಹೃದಯವನ್ನು ಒಳಹೊಕ್ಕು ನೋಡಬಲ್ಲ ದಕ್ಷ ಮನೋವಿಜ್ಞಾನಿಯಂತೆ, ನೋಡಿದ್ದಾರೆ. ಅವರು ಕಥೆಯಲ್ಲಿ ಹೆಚ್ಚಿನ ಪಾತ್ರಗಳನ್ನು ತಂದಿದ್ದಾರೆ. ಅದರಲ್ಲಿ ಮುಖ್ಯವಾದ ಪಾತ್ರ ಅಹಲ್ಯೆ ಗೌತಮರ ಮಗ ಶತಾನಂದನದು. ಈ ಪಾತ್ರ ಮೂಲದಲ್ಲಿ ಇಲ್ಲ ಎಂದಲ್ಲ, ಈ ಸಂಗತಿ ನಡೆಯುವ ಕಾಲಕ್ಕೆ ಆ ಬಾಲಕನ ಪ್ರಸ್ತಾಪ ಇಲ್ಲ.

ಒಂದು ಮಗುವಾಗಿ, ಅದರೊಡನೆ ಆಟವಾಡುತ್ತಿರುವ ಹೆಣ್ಣಿಗೆ, ಅವಳು ಎಷ್ಟೇ ಸುಂದರಿಯಾಗಿರಲಿ ದೇಹದ ಬಯಕೆ ಎಷ್ಟೇ ತೀವ್ರವಾಗಿರಲಿ ಪರಪುರುಷನೊಡನೆ ಕೂಡುವ ಬಯಕೆಯಾಯಿತು ಎಂದರೆ ಅವಳ ತಾಯ್ತನಕ್ಕೆ ಅಗೌರವ ತೋರಿದಂತಲ್ಲವೆ ?

ಪು. ತಿ. ನ. ರವರು ಅಹಲ್ಯೆಯ ಮನಸ್ಸಿನ ಒಳತೋಟಿಯ ಭಾಗವನ್ನು ಶಿಖರಪ್ರಾಯವಾಗಿ ಚಿತ್ರಿಸಿದ್ದಾರೆ. ಒಳತೋಟಿಯೇ ಇಲ್ಲದೆ ಅವಳು ಇಂದ್ರನ ವಶವಾದಳು ಎಂದರೆ ಅವಳಿಗೆ ತುಂಬ ಅನ್ಯಾಯ ಮಾಡಿದಂತಾಗುತ್ತಿತ್ತು. ತನ್ನ ಎದೆಯ ಆಸೆಯನ್ನು ತಗ್ಗಿಸಲು ಅವಳು ಬೇಕಾದಷ್ಟು ಪ್ರಯತ್ನ ಮಾಡಿದಳು. ಆದರೆ ದೇಹಧರ್ಮ ಗೆದ್ದಿತು. 'ಬದುಕಿನಲ್ಲಿ – ಎಷ್ಟೋ ಯುಗಕೊಮ್ಮೆ ಮಾತ್ರ ದೊರಕಬಹುದಾದ ಭಾಗ್ಯ ಇದು' ಎಂದು ಗಾಳಿದನಿಗಳು ಎಂದರೆ ಒಳದನಿಗಳು ಒತ್ತಾಯ ಮಾಡಿದವು, ಅಹಲ್ಯೆ ಸೋತಳು.

ಸುಂದರಿಯೂ ತರುಣಿಯೂ ಆದ ಹೆಣ್ಣು ಪತಿ ದೂರ ಸರಿದಿರಲು, ಅವಲಂಬನಕ್ಕೆ ಯಾರು ಇಲ್ಲದಿರಲು ಮನಸ್ಸು ಅತ್ತ ಇತ್ತ ಹರಿದಾಗ ಅದನ್ನು ತಡೆಯಲಾರದೆ ಹೋದಳು – ಎಂದರೆ ಅದು ಸಂಭವನೀಯವಾದ ಸಂಗತಿ ಯಾಗುತ್ತದೆ. ಆದರೆ ಪು. ತಿ. ನ. ರವರ ಅಹಲ್ಯೆಗೆ ಸಮಯವನ್ನು ತುಂಬಲು, ಬಾಳನ್ನು ಸವಿಯಾಗಿಸಲು ಮುದ್ದಾದ ಮಗನಿದ್ದಾನೆ. ಹೀಗೆ ವೇಳೆ ಹೋಗತ್ತಿದ್ದರೂ, ತಾಯ್ತನ ತುಡಿಯುತ್ತಿದ್ದರೂ ಪರಪುರುಷನನ್ನು ಕೂಡಿದಳು ಎಂದರೆ ಅವಳ ಪಾಪವನ್ನು ಹೆಚ್ಚುಗೊಳಿಸಿದಂತಾಗುತ್ತದೆ.

ಅಹಲ್ಯೆ ಮನಸ್ಸು ಮಾಡಿದ್ದರೆ ದೇಹದ ಬಯಕೆಯನ್ನು ಗೆಲ್ಲ ಬಹುದಾಗಿತ್ತು. ಮನಸ್ಸು ಗಾಳಿಪಟದಂತೆ ಅತ್ತ ಇತ್ತ ಹರಿದಾಗ ಅದನ್ನು ಹಿಡಿತದಲ್ಲಿ ಇಟ್ಟುಕೊಳ್ಳ ಬಹುದಾಗಿತ್ತು. ಎದೆಯ ಆಸೆಯನ್ನು ತಗ್ಗಿಸ ಬಹುದಾಗಿತ್ತು. ಏಕೆಂದರೆ ಮನಸ್ಸು

ಮಾಡಿದರೆ ಹೆಣ್ಣು ಏನು ಬೇಕಾದರೂ ಸಾಧಿಸಬಲ್ಲಳು. ದ್ರೌಪದಿ ಮನಸ್ಸು ಮಾಡಿ ಕುರುವಂಶವನ್ನೇ ನಾಶ ಮಾಡಿಸಲಿಲ್ಲವೆ? ಸೀತೆ ಲಂಕಾಪಟ್ಟಣವನ್ನೇ ಅವನತಿಗೀಡು ಮಾಡಿಸಲಿಲ್ಲವೆ? ಅಹಲ್ಯೆಗೆ ಮಾನಸಿಕ ದೌರ್ಬಲ್ಯ ಹೆಚ್ಚಿನದು. ಆದ್ದರಿಂದಲೇ ಅವಳ ಮನಸ್ಸು ದೇಹದ ಬಯಕೆಗೆ ಕಟ್ಟುಹಾಕಲಿಲ್ಲ. ಗೌತಮ ಮುನಿ ಅಹಲ್ಯೆಯಿಂದ ಸರಿದು ದೂರವಿದ್ದರೆ ಮಾತ್ರವೇನು? ರಾಮಾಯಣ ಮಹಾಕಾವ್ಯದಲ್ಲಿ ಲಕ್ಷ್ಮಣ ಊರ್ಮಿಳೆಯನ್ನು ತೊರೆದು ಹದಿನಾಲ್ಕುವರ್ಷ ಕಾಡಿನಲ್ಲಿ ಇರಲಿಲ್ಲವೆ? ಊರ್ಮಿಳೆಯಾದರೂ ಅರಮನೆಯ ರಾಜ್ಯವೈಭವದ ಮಧ್ಯದಲ್ಲಿಯೇ ಇದ್ದರೂ ಆದರ ಸುಖದಿಂದ ವಿಮುಖಳಾಗಿರಲಿಲ್ಲವೆ? ಇಲ್ಲಿ ಅಹಲ್ಯೆಗಾದರೋ ಮಗು ಶತಾನಂದ ಇದ್ದಾನೆ. ಆದರೆ ಊರ್ಮಿಳೆಗೆ ಮಗುವೂ ಇಲ್ಲ. ತಾರುಣ್ಯದ ಮತ್ತು ಅನುರಾಗದ ಹೊಂಬಿಸಿಲನ್ನು ಅದೀಗ ತಾನೆ ಕಂಡು ಆಸೆ ಆರಿರದಂತಹ ಸ್ತರದಲ್ಲಿದ್ದರೂ ಅವಳು ಅಸತಿ, ಕಲಂಕಿನಿಯಾಗಲಿಲ್ಲ. ಹಾಗೆಯೇ ನಾವು ಮತ್ತೊಂದು ಉದಾಹರಣೆ ಕೊಡಬೇಕಾದರೆ ಮಹಾತ್ಮ ಬುದ್ಧನ ಪತ್ನಿ ಯಶೋಧರೆ. ಸಿದ್ಧಾರ್ಥ ಯಶೋಧರೆಯನ್ನು ತೊರೆದು ಹೇಳದೆ ಕೇಳದೆ ರಾತ್ರೋ ರಾತ್ರಿ ಕಾಡಿಗೆ ತಪಸ್ಸು ಮಾಡಲು ಹೊರಟುಬಿಟ್ಟ. ರಾಹುಲ ಎಳೆಮಗು. ಆದರೂ ಯಶೋಧರೆ ಎಲ್ಲಾ ಸುಖವೈಭವಗಳ ಮಧ್ಯದಲ್ಲಿದ್ದರೂ ದಾರಿತಪ್ಪಲಿಲ್ಲ. ತನ್ನ ಆಸೆ ಆಮಿಷಗಳನ್ನೆಲ್ಲಾ ಅದುಮಿಟ್ಟು, ವೈರಾಗ್ಯದ ಕಟ್ಟನ್ನು ಕಟ್ಟಿ ತಮ್ಮ ಜೀವನವನ್ನೇ ನಡೆಸಿದರು ಊರ್ಮಿಳೆ ಮತ್ತು ಯಶೋಧರೆ. ತಮ್ಮ ಪತಿಗಳಿಗಾದರೂ ಕಂಟಕಪ್ರಾಯರಾಗಲಿಲ್ಲ. ಅವರುಗಳ ವ್ರತಕ್ಕೆ ವಿಘ್ನವನ್ನೂ ಒದಗಿಸಿದವರಲ್ಲ

ಒಟ್ಟಿನಲ್ಲಿ ನಾವು ಇಷ್ಟು ಹೇಳ ಬಹುದು ಅಹಲ್ಯೆ ನಡೆದು ಕೊಂಡದ್ದು ದೋಷನೀಯವಾದದು. ಅವಳು ಮನಸ್ಸನ್ನು ಸ್ಥಿಮಿತದಲ್ಲಿಟ್ಟು ಕೊಂಡಿದ್ದರೆ ಅಷ್ಟೊಂದು ಅನಾಹುತ ನಡೆಯುತ್ತಿರಲಿಲ್ಲ. ಅದು ಅವಳಿಂದ ಸಾಧ್ಯವಾಗಲಿಲ್ಲ. ಅದಕ್ಕೆ ಕಾರಣ ಅವಳ ಮಾನಸಿಕ ದೌರ್ಬಲ್ಯ. ಅಹಲ್ಯೆಯ ಹಾಗೆ ಇರುವ ಸ್ತ್ರೀಯರು ನಮ್ಮ ಸಮಾಜದಲ್ಲಿ ಬೇಕಾದಷ್ಟು ಕಂಡು ಬರುತ್ತಾರೆ ಅವರೆಲ್ಲರೂ ಅವರವರ ಮಾನಸಿಕ ದೌರ್ಬಲ್ಯಕ್ಕೆ ಒಳಗಾಗಿ ತಮ್ಮ ಜೀವನ ಪಥವನ್ನು ಡೊಂಕು ಡೊಂಕಾಗಿ ಮಾಡಿಕೊಂಡಿವಲ್ಲಷ್ಟೆ.

ಅದು ಏನೇ ಇರಲಿ; ಪು. ತಿ. ನರಸಿಂಹಚಾರ್ಯರ 'ಅಹಲ್ಯೆ' ಗೀತರೂಪಕದಲ್ಲಿ ಅಹಲ್ಯೆಬಿದ್ದ ಕಥೆ ಮಾತ್ರವಲ್ಲದೆ, ಮತ್ತೆ ಅವಳ ಎದ್ದ ಕಥೆಯೂ ಆಗಿ ಅವರಿಗೆ ಅತ್ಯಂತ ಜನಪ್ರಿಯತೆಯನ್ನು ತಂದು ಕೊಟ್ಟದೆ ರಾಮಾಯಣದಲ್ಲಿ ಕ್ವಚಿತ್ತಾಗಿ ಬರುವ ಅಹಲ್ಯೆಯ ಪ್ರಸ್ತಾಪವನ್ನು ತೆಗೆದು ಕೊಂಡು, ಅದರ ರೇಖಾಚಿತ್ರವನ್ನು ದೊಡ್ಡದು ಮಾಡಿ ಅದಕ್ಕೆ ಬಣ್ಣ ತುಂಬಿ ಜೀವಕಳೆಗೊಟ್ಟು ಸೃಷ್ಟಿಸಿರುವುದೇ ಅಹಲ್ಯೆ ನಾಟಕದ ಹಾಗೂ ಲೇಖಕರ ಹಿರಿಮೆ ಗರಿಮೆಯಾಗಿದೆ. ★

## ಶ್ರೀ ಪದ್ಮಾವತೀ ದೇವಾಲಯ



### ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ಕಿಶೋರ ಜಗತ್



# ಮಹರ್ಷಿ ಪರಾಶರ

ಮಹಾ ತಪಸ್ವಿಗಳಾದ ವಸಿಷ್ಠರಿಗೆ ಶಕ್ತಿ ಎಂಬ ಪುತ್ರನಿದ್ದನು. ಆತ ಮಹಾ ಮೇಧಾವಿ. ಎಲ್ಲಾ ವಿದ್ಯೆಗಳನ್ನೂ ಶಾಸ್ತ್ರಗಳನ್ನೂ ಒಂದೇ ಸಲ ಕಲಿಯಬೇಕೆಂಬ ಮಹದಾಸೆ. ಶಕ್ತಿಯಲ್ಲಿ ಇದ್ದ ಒಂದು ದುರ್ಗುಣವೆಂದರೆ ಚಿಕ್ಕ ವಿಷಯಗಳಿಗೆಲ್ಲಾ ಬಹು ಬೇಗನೆ ಕೋಪಗೊಳ್ಳುತ್ತಿದ್ದ.

ವಸಿಷ್ಠರು ಶಕ್ತಿಗೆ, “ತಪಸ್ವಿಗಳಿಗೆ ಕೋಪವು ಬಹಳ ದೊಡ್ಡ ಶತ್ರು. ಅವರು ಕಷ್ಟಪಟ್ಟು ಗಳಿಸಿದ ತಪಶ್ಶಕ್ತಿಯನ್ನು ಕೋಪವು ಒಂದೇ ಕ್ಷಣದಲ್ಲಿ ಹಾಳು ಮಾಡುತ್ತದೆ. ಆದ್ದರಿಂದ ತಾಳ್ಮೆಯಿಂದ ಇರುವುದನ್ನು ಕಲಿ” ಎಂದು ಹೇಳುತ್ತಿದ್ದರು. ಆದರೂ ಇವನು ಅವನು ಕೋಪವನ್ನು ಬಿಡಲಿಲ್ಲ.

ಒಂದು ದಿನ ಶಕ್ತಿಯು ಸಂಧ್ಯಾವಂದನೆಗೆಂದು ನದಿಯ ದಂಡೆಯ ಮೇಲೆ ಹೋಗುತ್ತಿದ್ದನು. ಆ ಕಿರಿದಾದ ದಂಡೆಯಲ್ಲಿ ಇವನ ಎದುರುಗಡೆಯಿಂದ ಕಲ್ಮಾಷಪಾದ ಎಂಬ ಸೂರ್ಯ ವಂಶದ ದೊರೆಯು ಬಂದನು. ತನಗೆ ಅಡ್ಡ ಬಂದುದನ್ನು ಕಂಡು ಶಕ್ತಿಯು ಕೋಪದಿಂದ, “ಯಾರು ನೀನು? ನಾನು ಬರುತ್ತಿರುವುದು ಕಾಣಿಸುವುದಿಲ್ಲವೇ” ಒಂದು ಗುಡುಗಿದನು. ರಾಜನು ಶಾಂತ ರೀತಿಯಿಂದ ತನ್ನ ಪರಿಚಯವನ್ನು ತಿಳಿಸಿ. “ಮುನಿಗಳೇ ತಮಗೇಕೆ ಇಷ್ಟು ಕೋಪ?” ಎನ್ನಲು, ಶಕ್ತಿಯು, “ಮೂರ್ಖ ಹರಟೆ ಬೇಡ, ಅತ್ತ ಸರಿ ಸಂಧ್ಯಾವಂದನೆಗೆ ಸಮಯವಾಯಿತು,” ಎಂದು ರಾಜನ್ನು ಪಕ್ಕಕ್ಕೆ ತಳ್ಳಲು ಹೋದ. ಇದರಿಂದ ಕಲ್ಮಾಷಪಾದನೂ ಕೆರಳಿ, ಇಬ್ಬರಿಗೂ ವಾಗ್ಯುದ್ಧವೇ ನಡೆಯಿತು. ಶಕ್ತಿಯು ಬಹಳ ಕೋಪಗೊಂಡು, “ಅಧಮ, ದಾನವನಂತೆ ಮೇಲೆರಗುವೆಯೊ? ನೀನು ರಾಕ್ಷಸನಂತೆ ವರ್ತಿಸಿದ್ದರಿಂದ ರಾಕ್ಷಸನಾಗು” ಎಂದು ಶಪಿಸಿದನು.

ರಾಜನ ದೇಹವು ಅರೆಕ್ಷಣದಲ್ಲಿ ವಿಕಾರವಾಗಿ ಬೆಳೆದು ರಾಕ್ಷಸ ರೂಪ ತಾಳಿತು. ಈ ದೃಶ್ಯವನ್ನು ಕಂಡ ಶಕ್ತಿಯು ನಡುಗಿದನು, ರಾಕ್ಷಸನಾದ ಕಲ್ಮಾಷಪಾದನು ಬಾಯಿ ತೆರೆದು ಶಕ್ತಿಯನ್ನು ನುಂಗಲು ಬಂದನು. ಶಕ್ತಿಯು ಎಷ್ಟೇ ಓಡಿದರೂ ಅವನಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಅವನು ಶಕ್ತಿಯನ್ನು ಹಿಡಿದು ನುಂಗೇ ಬಿಟ್ಟನು. ಈ ಸುದ್ದಿ ತಿಳಿದ ಶಕ್ತಿಯ ತಮ್ಮಂದಿರು ರಾಕ್ಷಸನನ್ನು ಕೊಲ್ಲಲು ಬಂದರು. ಅವರನ್ನು ಕ್ಷಣಮಾತ್ರದಲ್ಲಿ ಸಿಗಿದು ಬಿಟ್ಟನು.

ಮಕ್ಕಳನ್ನೆಲ್ಲಾ ಕಳೆದುಕೊಂಡ ವಸಿಷ್ಠರು ಬಹಳ ದುಃಖಗೊಂಡರು. ಶಕ್ತಿಯು ತನ್ನ ಕೋಪದಿಂದ ಎಂತಹಾ ಅನರ್ಥ ಮಾಡಿಬಿಟ್ಟ ಎಂದು ಗೋಳಿಟ್ಟರು. ಶಕ್ತಿಯ ಪತ್ನಿಯಾದ ಅದೃಶ್ಯಂತಿಯನ್ನು ಕಂಡಾಗ ಅವರಿಗೆ ಬಹಳ ಸಂಕಟವಾಗುತ್ತಿತ್ತು.

ಹೀಗೆ ಬಹಳ ದುಃಖದಿಂದ ಇರಲು ಒಂದು ದಿನ ವಸಿಷ್ಠರಿಗೆ “ಸಹನಾಭವತು ಸಹನೌ ಭುನಕ್ತು” ಎಂಬ ಶ್ಲೋಕವು ಕೇಳಿಸಿತು. ಅದು ಸೊಸೆಯ ಕಡೆಯಿಂದ ಬಂದ ಧ್ವನಿ. ವಸಿಷ್ಠರಿಗೆ ಆಶ್ಚರ್ಯವಾಯಿತು. ನಂತರ ಅವರಿಗೆ ತಮ್ಮ ಸೊಸೆ ಗರ್ಭಿಣಿಯಾಗಿದ್ದು ಅವಳ ಗರ್ಭದಲ್ಲಿರುವ ಶಿಶು ಈ ಮಂತ್ರವನ್ನು ಹೇಳುತ್ತಿರುವುದೆಂದು ತಿಳಿಯಿತು. ಅವರಿಗೆ ಬಹಳ ಆನಂದವಾಯಿತು. ಶಕ್ತಿಯ ಮಗ ಹುಟ್ಟುತ್ತಾನೆ. ವಂಶಕ್ಕೆ ಕೀರ್ತಿ ತರುತ್ತಾನೆ ಎಂದುಕೊಂಡರು.

ಶಕ್ತಿಯ ಮಗನೇ ಪರಾಶರ.

ಪರಾಶರ ದೊಡ್ಡವನಾದ ಮೇಲೆ ಬಹಳ ಪ್ರಸಿದ್ಧನಾದ. ಅಲ್ಲದೇ ಇವನ ಮಗ ವ್ಯಾಸ. ಮೊಮ್ಮಗ ಶುಕಮಹಾದೇವ ಮಹಾ ತಪಸ್ವಿಗಳೂ, ಮೇಧಾವಿಗಳೂ ಆದರು.

ಪರಾಶರನೂ ತನ್ನ ತಾತ ವಸಿಷ್ಠರಿಂದ ಶಾಸ್ತ್ರಗಳನ್ನು ಕಲಿತು ವಿದ್ಯಾವಂತನಾದ.

ಪರಾಶರನು ವಸಿಷ್ಠರನ್ನು ಅಪ್ಪಾ ಎಂದೇ ಕರೆಯುತ್ತಿದ್ದುದನ್ನು ಕಂಡು ಅದೃಶ್ಯಂತಿಯು, “ಕಂದಾ ಮಾವನವರನ್ನು ತಾತ ಎಂದು ಕರೆಯ ಬೇಕು.” ಎಂದು ಹೇಳಿದಳು.

“ಹಾಗಾದರೆ ನನ್ನ ತಂದೆ ಎಲ್ಲಿ?” ಎಂದು ಪರಾಶರ ಕೇಳಿದ.

ತಾಯಿಗೆ ಬಹಳ ಸಂಕಟವಾಯಿತು. ತಂದೆಯ ವಿಷಯ ಹೇಳಿದರೆ ಪರಾಶರನಿಗೆ ಬಹಳ ದುಃಖವಾಗುತ್ತದೆ. ಕೋಪವೂ ಬರುತ್ತದೆ. ಆದರೆ ಎಷ್ಟು ದಿನ ಎಂದು ವಿಷಯವನ್ನು ಮುಚ್ಚಿಡುವುದೆಂದು ಶಕ್ತಿಯ ವಿಷಯವನ್ನೆಲ್ಲಾ ಪರಾಶರನಿಗೆ ತಿಳಿಸಿಬಿಟ್ಟಳು.

ತನ್ನ ತಂದೆಗೆ ಬಂದ ಗತಿಯನ್ನು ಕೇಳಿ ಬಾಲಕನಾದ ಪರಾಶರನಿಗೆ ಬಹಳ ಸಿಟ್ಟು ಬಂತು. ಅವನು ದೊಡ್ಡವನಾದಂತೆ ಕೋಪವೆಂಬುದೂ ಬೆಳೆಯಿತು.

ಪರಾಶರನ ವಿದ್ಯೆಯಲ್ಲವೂ ಮುಗಿಯಲು. ವಸಿಷ್ಠರು, “ಮಗೂ ನೀನು ಎಲ್ಲಾ ವಿದ್ಯೆಗಳನ್ನು ಕಲಿತಿರುವೆ. ವೇದ ಪುರಾಣಗಳ ಅನು

ಶ್ರೀ ಆರ್. ಅನಂತನಾರಾಯಣ

ಗ್ರಹದಿಂದ ನಿನಗೆ ಅಪೂರ್ವ ತೇಜಸ್ಸು ದೊರೆತಿದೆ. ಯಜ್ಞ ಯಾಗಗಳನ್ನು ನಡೆಸುವ ಶಕ್ತಿ ನಿನಗುಂಟಾಗಲಿ'' ಎಂದು ಆಶೀರ್ವದಿಸಿದರು.

ತಂದೆಯ ಸಾವು ಪರಾಶರನನ್ನು ಒಳಗೇ ದಹಿಸುತ್ತಿತ್ತು. ಒಮ್ಮೆ ಲೋಕವನ್ನೇ ಭಸ್ಮ ಮಾಡಬೇಕೆಂದು ಛಲ ಮಾಡಿತು. ಒಂದು ವಿಶಾಲವಾದ ಯಜ್ಞ ಕುಂಡವನ್ನು ನಿರ್ಮಿಸಿ ಮಹಾ ಯಜ್ಞವನ್ನು ಆರಂಭಿಸಿದನು. ಇದರಿಂದ ಭಾರಿ ಅನಾಹುತವೇ ಆಗತೊಡಗಿತು. ಭೂಮಿಯೆಲ್ಲಾ ಒಣಗಿ ಹೋಯಿತು. ನದಿಯ ನೀರೆಲ್ಲಾ ಬತ್ತಿತ್ತು. ಸೂರ್ಯ ಚಂದ್ರರೂ ನಡುಗಿದರು. ಹೀಗೆ ಲೋಕವೇ ತಳಮಳಗೊಂಡಿತು.

ಅನೇಕ ಮುನಿಗಳು ಪರಾಶರನಿಗೆ ಯಾಗವನ್ನು ನಿಲ್ಲಿಸುವಂತೆ ಬೇಡಿಕೊಂಡರು. ಪರಾಶರನು ಯಾರ ಮಾತನ್ನೂ ಕೇಳಲಿಲ್ಲ. ಲಕ್ಷಾಂತರ ಜೀವರಾಶಿಗಳು ಯಜ್ಞ ಕುಂಡದಲ್ಲಿ ಬೀಳುತ್ತಿದ್ದವು.

ಇದನ್ನೆಲ್ಲಾ ಕಂಡ ವಸಿಷ್ಠರಿಗೆ ಮನ ಕರಗಿತು. ತನ್ನ ಮಗ ಶಕ್ತಿಯಂತೆ ಪರಾಶರನೂ ಕೋಪದಿಂದ ಅನಾಹುತ ಮಾಡುತ್ತಿರುವನಲ್ಲಾ ಎಂದು ಕೊಂಡು ಪರಾಶರನ ಬಳಿ ಬಂದು, "ಪರಾಶರ, ಏನಿದು ವಿಪರೀತ, ವೇದಗಳನ್ನು ತಿಳಿದ ನೀನು ಹೀಗೆ ಮಾಡಬಹುದೇ? ಸಕಲ ಶಾಸ್ತ್ರಗಳನ್ನು ನೀನು ಕಲಿತಿದ್ದು ಇದಕ್ಕಾಗಿಯೇ? ನಿನ್ನ ತಂದೆ ಸತ್ತಿದ್ದು ಕೋಪದಿಂದ. ಈ ಯಾಗದಿಂದ ಅನೇಕ ಜೀವರಾಶಿಗಳು ಸಾಯುತ್ತಿವೆ. ಇನ್ನಾದರೂ ಈ ಅನ್ಯಾಯವನ್ನು ನಿಲ್ಲಿಸು '' ಎಂದರು.

ಪರಾಶರನಿಗೆ ಆಗ ಜ್ಞಾನೋದಯವಾಯಿತು. ವಸಿಷ್ಠರ ಮಾತೂ ನಿಜವೆನಿಸಿತು. ತನ್ನ ತಂದೆಯನ್ನು ಕೊಂದದ್ದು ಒಬ್ಬ ರಾಕ್ಷಸ. ಆದರೆ ನಾನು ಜೀವರಾಶಿಗಳನ್ನೆಲ್ಲಾ ಕೊಲ್ಲುತ್ತಿರುವುದು ಸರಿಯಲ್ಲ ಎಂದು ಅರಿತ. ತಕ್ಷಣವೇ ಯಜ್ಞವನ್ನು ಸಮಾಪ್ತಿಗೊಳಿಸಿದ.

ಪರಾಶರ ಪವಿತ್ರವಾದ ಹಿಮಾಲಯ ಪರ್ವತಕ್ಕೆ ತೆರಳಿ ಅಲ್ಲೊಂದು ಪ್ರಶಾಂತವಾದ ಸ್ಥಳವನ್ನಾರಿಸಿಕೊಂಡು ಆಶ್ರಮವನ್ನು ನಿರ್ಮಿಸಿದ. ಅವನ ಬಳಿ ವಿದ್ಯೆ ಕಲಿಯಲು ಅನೇಕ ಜನ ಬರುತ್ತಿದ್ದರು. ಅವನ ಅನೇಕ ಮಂದಿ ಶಿಷ್ಯರಲ್ಲಿ ಮೈತ್ರೇಯ ಎಂಬುವವನು ಪರಾಶರನಿಗೆ ಅಚ್ಚು ಮೆಚ್ಚಿನವನಾಗಿದ್ದನು. ತನ್ನ ಎಲ್ಲಾ ವಿಚಾರಗಳನ್ನು ತನ್ನ ಮಗನಂತಿದ್ದ ಮೈತ್ರೇಯನ ಬಳಿ ಅರಹುತ್ತಿದ್ದ. ಒಂದು ದಿನ ಪರಾಶರ, "ಮೈತ್ರೇಯ, ನನಗೆ ಜಪ ತಪಗಳಲ್ಲಿ ಏಕಾಗ್ರತೆ ಇಲ್ಲದಾಗಿದೆ. ಅನ್ಯಾಯವಾಗಿ ಒಬ್ಬ ದಾನವನು ನಮ್ಮ ತಂದೆಯನ್ನು ಕೊಂದು ಹಾಕಿದ ನೋವು ನನ್ನನ್ನು ದಹಿಸುತ್ತಿದೆ. ಅದ್ದರಿಂದ ಯಾರಿಗೂ ತಿಳಿಯದಂತೆ ಕಣ್ಮರೆಯಾಗಿ, ರಾಕ್ಷಸರು ನಾಶವಾಗಲಿ ಎಂದು 'ರಾಕ್ಷಸ ಸತ್ರ' ಎಂಬ ಯಾಗವನ್ನು ಆರಂಭಿಸುವೆ. ನೀನು ಆಶ್ರಮವನ್ನು ನೋಡಿಕೋ'' ಎಂದ ಹೇಳಿ ಹೊರಟ.

ಪರಾಶರನು ಯಾಗವನ್ನು ಆರಂಭಿಸಿಯೇ ಬಿಟ್ಟ. ಅದರಿಂದ ಅನೇಕ ರಾಕ್ಷಸರು ತಮ್ಮ ಬಲವನ್ನೆಲ್ಲಾ ಕಳೆದು ಕೊಂಡರು. ಇನ್ನನ್ನೇಕರು ಕೈಕಾಲುಗಳನ್ನು ಕಳೆದು ಕೊಂಡರು. ಮತ್ತೆ ಕೆಲವರು ಯಜ್ಞ ಕುಂಡದ ಜ್ವಾಲೆಯಿಂದ ಉಸಿರು ಕಟ್ಟಿ ಅಸುನೀಗಿದರು.

ವಿಧವೆಯರಾದ ರಾಕ್ಷಸ ಸ್ತ್ರೀಯರ ಗೋಳು, ಅವರ ಮಕ್ಕಳ ಚೀರಾಟ ಹೃದಯ ಹಿಂಡುವಂತಿತ್ತು. ಅವರುಗಳಿಗೆ ಏನೂ ಮಾಡಲು ತೋರಲಿಲ್ಲ. ಕೊನೆಗೆ ರಾಕ್ಷಸರೆಲ್ಲಾ ಋಷಿಗಳ ಕಾಲಿಗೆ ಬಂದು ಬಿದ್ದರು. ಆಗ ಪುಲಸ್ತ್ಯ, ಕ್ರತು, ಪುಲಹ ಮೊದಲಾದವರು ಅವರನ್ನು ಸಮಾಧಾನಪಡಿಸಿ ಪರಾಶನ ಬಳಿ ಹೊರಟರು.

ಋಷಿಗಳು ಪರಾಶರನನ್ನು ಕುರಿತು, "ಪರಾಶರ, ನೀನು ಬ್ರಹ್ಮಜ್ಞಾನಿ, ಸಕಲ ಶಾಸ್ತ್ರಗಳೂ ನಿನ್ನಲ್ಲಿ ನೆಲೆಯಾಗಿ ನಿಂತಿವೆ. ತಪ್ಪು ಮಾಡಿರುವವರನ್ನು ಶಿಕ್ಷಿಸುವುದು ಧರ್ಮ; ಆದರೆ ನಿರ್ದೋಷಿಗಳಾದ ಈ ರಾಕ್ಷಸರನ್ನು ಹೀಗೆ ಕೊಲ್ಲುವುದೇ? ನಿರ್ದೋಷಿಯಾದ ಒಬ್ಬನನ್ನು ಕೊಂದರೂ ಅದು ಸಾವಿರ ಗೋಹತ್ಯೆ ನಡೆಸಿದಂತೆ. ಈ ಅನ್ಯಾಯವನ್ನು ನಿಲ್ಲಿಸಿ ಧರ್ಮಿಯಾಗು'' ಎಂದು ಹೇಳಿದರು.

ಪರಾಶರನು ಋಷಿಗಳ ಮಾತಿಗೆ ಮಣಿದು ತನ್ನ ಸೇಡಿನ ಕಿಡಿಯನ್ನು ಆರಿಸಿದ.

## ಹೊಸ ಊಂಜಲ್ ಸೇವೆ

ಶ್ರೀ ವೆಂಕಟೇಶ್ವರಸ್ವಾಮಿಯನ್ನು ಭಕ್ತರು ಅರ್ಚಿಸಲು ಅನುವಾಗುವಂತೆ ಪರಂಪರೆಯಿಂದ ನಡೆಯುತ್ತಿರುವ ಊಂಜಲ್ ಸೇವೆಯೊಂದಿಗೆ ಅಪೂರ್ವವಾದ ಹೊಸ ಊಂಜಲ್‌ಸೇವೆಯನ್ನು ಆರಂಭಿಸಲಾಗಿದೆ.

ಹೆಚ್ಚು ಮಂದಿ ಭಕ್ತರು ಸ್ವಾಮಿಯ ಆರಾಧನೆ ಮಾಡಲು ಅನುಕೂಲವಾಗುವಂತೆ ಆಲಯದ ಹೊರಗಣ ಖನಿಜ ಮಂಟಪದಲ್ಲಿ ಈ ಹೊಸಸೇವೆಯನ್ನು ಏರ್ಪಾಡು ಮಾಡಲಾಗುತ್ತದೆ.

ಹೊಸ ಊಂಜಲ್‌ಸೇವೆ ಮಾಡಿಸಲು ಗೃಹಸ್ಥರು ಮುಂದೆ ಬಾರದಿದ್ದ ದಿನಗಳಲ್ಲಿ ಊಂಜಲ್‌ಸೇವೆ ಮುಕುರಮಂಟಪದಲ್ಲಿ ನಡೆಯುತ್ತದೆ.

ಆದರೆ ಅಗ್ನಿಕುಂಡದ ಗತಿ? ಅದನ್ನು ಮಧ್ಯೆ ನೀರು ಹಾಕಿ ಆರಿಸುವಂತಿಲ್ಲ. ಆಗ ಆ ಅಗ್ನಿಯನ್ನೆಲ್ಲಾ ಸೇರಿಸಿ ಹಿಮಾಲಯದ ಉತ್ತರದಲ್ಲಿ ಬಿಟ್ಟ. ಪರಾಶರನ ಈ ಧರ್ಮಬುದ್ಧಿಗೆ ಎಲ್ಲರೂ ತಲೆದೂಗಿದರು. ಅವನ ಔದಾರ್ಯವನ್ನು ಕೊಂಡಾಡಿ, " ಪರಾಶರ, ನಿನ್ನ ನಡೆಯಿಂದ ನಮಗೆಲ್ಲಾ ಸಂತಸವಾಗಿದೆ. ಇನ್ನು ಮುಂದೆ ಸಕಲ ಶಾಸ್ತ್ರಗಳೂ ನಿನ್ನಲ್ಲಿ ನೆಲೆಸಲಿ. ಆಕಸ್ಮಿಕ ವಾಗಿ ತಲೆದೋರುವ ಶಂಕೆಗಳಿಗೆ ಯಾರೂ ಉತ್ತರಿಸದೆಯೇ ನಿನಗೆ ಸತ್ಯದ ಅರಿವು ಆಗಲಿ. ನೀನು ಒಬ್ಬ ಗೋತ್ರ ಪ್ರವರ್ತಕ ನಾಗಿ ಖ್ಯಾತಿಗಳಿಸುವೆ. ನಿನಗೆ ಮಂಗಳ ವುಂಟಾಗಲಿ " ಎಂದು ಹಾರೈಸಿದರು.

ಪರಾಶರನಿಗೆ ಶಿವನಲ್ಲಿ ಬಹಳ ಭಕ್ತಿ. ಒಮ್ಮೆ ಶಿವನನ್ನು ಒಲಿಸಿಕೊಳ್ಳಲು ಶಿವನ ಸಹಸ್ರನಾಮಗಳಿಂದ ಅರ್ಚಿಸಿದರು. ಪರ ಶಿವ ಪರಾಶರ ಭಕ್ತಿಗೆ ಒಲಿದು ತನ್ನಿಂದೇನಾ ಗಬೇಕೆಂದನು: " ಹೇ, ಮಹಾದೇವ, ನನ್ನಲ್ಲಿ ನೆಲೆಸುವಂತೆ ಎಲ್ಲ ಋಷಿಗಳೂ ವೇದ, ವೇದಾಂಗ, ಮತ್ತು ಸಕಲ ಶಾಸ್ತ್ರಗಳನ್ನು ಕರುಣಿಸಿದ್ದಾರೆ. ಇವೆಲ್ಲವನ್ನೂ ಲೋಕ ಕಲ್ಯಾಣಕ್ಕಾಗಿ ನೀಡಬೇಕು. ನನ್ನ ಮನಸ್ಸಿ ನಲ್ಲಿರುವ ಕಾರ್ಯವನ್ನು ಮಾಡಬಲ್ಲ ಒಬ್ಬ ಪುತ್ರನು ನನಗೆ ಬೇಕು. ಅನುಗ್ರ ಹಿಸು " ಎಂದು ಕೇಳಿಕೊಂಡರು.

ಶಿವನು, " ಹಾಗೆಯೇ ಆಗಲಿ, ನೀನು ಇಷ್ಟಪಟ್ಟಂತೆ ಯುಗ ಪ್ರವರ್ತಕ ಆದ ಮಗನು ಜನಿಸುವನು. ಅವನು ಲೋಕ ಪೂಜ್ಯನೂ ಆಗುವನು " ಎಂದು ಅನುಗ್ರಹಿ ಸಿದನು.

ಪರಾಶರ ಮುಂದೆ ಸತ್ಯವತಿ ಎಂಬ ಕನ್ಯೆಯನ್ನು ವಿವಾಹವಾದ. ಇವರಿಬ್ಬ ರಿಗೆ ಜನಿಸಿದ ಪುತ್ರನೇ ಮಹಾ ಭಾರತವನ್ನು ರಚಿಸಿದ ವ್ಯಾಸ ಮಹರ್ಷಿ. ವ್ಯಾಸ ಮಹಾ ಭಾರತವನ್ನು ಬರೆದಿಟ್ಟದ್ದು ಮಾತ್ರ ವಲ್ಲದೆ, ವೇದಗಳನ್ನೆಲ್ಲಾ ಅರ್ಥ ಮಾಡಿ ಕೊಂಡು ಸರಿಯಾಗಿ ಭಾಗಗಳನ್ನು ಮಾಡಿ, ಮುಂದೆ ಓದುವವರಿಗೆಲ್ಲಾ ದೊಡ್ಡ ಸಹಾಯ ಮಾಡಿದ. ★

---

( 7ನೇ ಪುಟದಿಂದ )

ನಮಸ್ಕರಿಸುವೆ" ಎಂಬುದಾಗಿ ಸವಾಲು ಹಾಕಿದ್ದಾರೆ. ಆ ಕೃಷ್ಣನ ಕಿಶೋರ ಭಾವ. ಆ ಮುದ್ದುಮುಖ, ಆ ಲೀಲಾಕಟಾಕ್ಷಗಳು, ಆ ಸೌಂದರ್ಯ, ಆ ಮಂದಹಾಸ-ಸತ್ಯವಾಗಿ ದೇವತೆ ಗಳಿಗೂ ದುರ್ಲಭ. ಆದರೆ ಮುಗ್ಧ ಗೋಪ ಗೋಪಿಯರಿಗೆ ಕೃಷ್ಣನ ಅಧರ ಬಿಂಬದಲ್ಲಿ ಮಧುರ ಸ್ವರ, ಮಂದಹಾಸದಲ್ಲಿ ಮಂಜುಲನಾದ, ಅಮೃತ ಸಮವಾದ ಮಾತಿನಲ್ಲಿ ಲೀಲಾಕಟಾಕ್ಷ, ಅತಿ ಕೆಂಪಾದ ಕಣ್ಣು, ಕೊಳಲ ಗಾನದ ಲಹರಿ, ಮರಕತಮಣಿ ನೀಲವರ್ಣ ಕಿಶೋರ ಕೃಷ್ಣನ ಸಾನ್ನಿಧ್ಯ ಸಿಕ್ಕಿದ್ದು ಅವರ ಮಹಾಭಾಗ್ಯವೇ ಭಾಗ್ಯ ಇದನ್ನು ಕುರಿತೇ ಲೀಲಾಶುಕರು ;

> ಚಾಪಲ್ಯಸೀಮ ಚಪಲಾನುಭವೈಕ ಸೀಮ
> ಚಾತುರ್ಯ ಸೀಮ ಚತುರಾನನ ಶಿಲ್ಪ ಸೀಮ
> ಸೌರಭ್ಯ ಸೀಮ ಸಕಲಾದ್ಭುತ ಕೇಲಿ ಸೀಮ
> ಸೌಭಾಗ್ಯ ಸೀಮ ತದಿದಂ ವ್ರಜ ಭಾಗ್ಯ ಸೀಮ

ಎಂಬುದಾಗಿ ವರ್ಣಿಸುತ್ತಾ ಚಾಪಲ್ಯದ ಮೇರು, ಚಾತುರ್ಯದ ಎಲ್ಲೆ, ಸೃಷ್ಟಿಕರ್ತನ ಶಿಲ್ಪ ಕಲೆಯ ಎಲ್ಲೆ, ಸೌಲಭ್ಯ, ಸೌಭಾಗ್ಯದ ಎಲ್ಲೆ, ಆದ ಆ ಪರಾವಸ್ತು ನಂದಗೋಕುಲದ ಭಾಗ್ಯದ ಎಲ್ಲೆ ಎಂಬುದಾಗಿ ಕೊಂಡಾಡಿದ್ದಾನೆ.

ಭಗವದ್ಗೀತೆಯಲ್ಲಿ ಕೃಷ್ಣ –

> ಸತತಂ ಕೀರ್ತಯಂತೋಮಾಂ
> ಯತಂತಶ್ಚ ದೃಢವ್ರತಾಃ।
> ನಮಸ್ಯಂತಶ್ಚಮಾಂ ಭಕ್ತ್ಯಾ
> ನಿತ್ಯಯುಕ್ತಾ ಉಪಾಸತೇ ॥

ಎಂಬುದಾಗಿ ಹೇಳಿದ್ದಾನೆ. ಭಕ್ತರು ಅತ್ಯಂತ ವಾಗಿ ಭಗವಂತನಲ್ಲಿ ಪ್ರೀತಿ ವಿಶೇಷದಿಂದ ಅವನ ನಾಮ ಕೀರ್ತನಾದಿಗಳನ್ನು ಬಿಟ್ಟರೆ ಬೇರೆ ಧ್ಯಾನ ವಿಲ್ಲದವರಾಗಿ ಅವನ ನಾಮಗಳನ್ನೇ ಸ್ಮರಿಸಿ ಧ್ಯಾನಿಸಿ ಆರಾಧಿಸಿ ಕೈಂಕರ್ಯದಲ್ಲಿ ಕೃತಕೃತ್ಯ ರಾಗುತ್ತಾರೆ. ಯಾವ ಕರ್ಮದ ಫಲವೇ ಆಗಲಿ ಭಗವಂತನಿಗೆ ಅರ್ಪಿತವಾದರೆ ಅದೇ ಯಜ್ಞ. ಕವಿ ಲೀಲಾಶುಕನು ಗೋಪಕನ್ಯೆಯರ ಭಕ್ತಿಯನ್ನು ವರ್ಣಿಸುತ್ತಾ;

> ವಿಕ್ರೇತುಕಾಮಾ ಕಿಲ ಗೋಪಕನ್ಯಾ
> ಮುರಾರಿ ಪಾದಾರ್ಪಿತ ಚಿತ್ತವೃತ್ತಿಃ
> ದಧ್ಯಾದಿಕಂ ಮೋಹವಶಾದವೋಚತ್
> ಗೋವಿಂದ ದಾಮೋದರ ಮಾಧವೇತಿ ॥

ಒಬ್ಬಗೋಪಿ ಕೃಷ್ಣಾನುರಾಗಿ ತನ್ನ ಚಿತ್ತವೃತ್ತಿ ಯಲ್ಲಿ ಮುರಾರಿಯ ಪಾದಗಳಲ್ಲಿ ಲೀನವಾಗಿದ್ದಳು. ಅವಳು ಹಾಲು ಮೊಸರುಗಳನ್ನು ಮಾರಲು ಹೊರಟು ಹಾಲು ಮೊಸರುಗಳಿಗಿಂತ ಹೆಚ್ಚಾಗಿ ಕೃಷ್ಣನ ಮೇಲೆಯೇ ಮೋಹವಿದ್ದರಿಂದ "ಹಾಲು ಬೇಕೆ, ಮೊಸರು ಬೇಕೆ, ಎಂಬುದಾಗಿ ಕೂಗುವ ಬದಲು "ಗೋವಿಂದ ಬೇಕೆ, ದಾಮೋದರನು ಬೇಕೆ, ಮಾಧವನು ಬೇಕೆ" ಎಂಬುದಾಗಿ ಕೂಗಿದ ಳಂತೆ

ಶ್ರೀ ನಾರದರ ಭಕ್ತಿ ಸೂತ್ರದಲ್ಲಿ ಭಕ್ತಿಯನ್ನು ವಿವರಿಸುತ್ತಾ "ತದರ್ಪಿತಾಖಿಲಾಚಾರಿತಾ ತದ್ವಿ ಸ್ಮರಣೇ ಪರಮ ವ್ಯಾಕುಲತೇತಿ" ಎಂಬುವುದಾಗಿ ಹೇಳುವಾಗ ಭಗವಂತನನ್ನು ಶರಣನಾಗಿ ಎಲ್ಲ ವನ್ನೂ ಮಾಡುವುದು ಅವನನ್ನು ಕ್ಷಣಕಾಲ ಮರೆತರೂ ಪರಮ ವ್ಯಾಕುಲತೆಯನ್ನು ಪಡೆ ಯುವುದೇ ಭಕ್ತಿ ಎಂದು ವಿವರಿಸುತ್ತಾ "ಯಥಾ ವ್ರಜ ಗೋಪಿಕಾನಾಂ" – ವ್ರಜಗೋಪಿಯರ ಹಾಗೆ. ತೈಲ ಧಾರೆಯಂತೆ ನಿರಂತರವಾಗಿ ಸ್ಮರಿ ಸುವ ಶಕ್ತಿ ಆ ಗೋಪಿಯರಿಗಿತ್ತು. ಅವರ ಚಿತ್ತೈ ಕಾಗ್ರತೆಯನ್ನು ನೋಡಿದರೆ ಅದ್ಭುತವಾಗಿರುವುದು. ಕೃಷ್ಣಕರ್ಣಾಮೃತದ ಒಂದೊಂದು ಶ್ಲೋಕ ಒಂದೊಂದು ಚಿತ್ರಶಾಲೆ. ಗೋಕುಲದಲ್ಲಿ ಎಲ್ಲ ಗೋಪಿಯರು ಎಲ್ಲಾ ಕಾಲದಲ್ಲೂ, ಎಲ್ಲಾ ಅವಸ್ಥೆ ಗಳಲ್ಲಿ ಅವನ ನಾಮ ಸ್ಮರಣೆ ಮಾಡುತ್ತಿದ್ದರು ಎಂಬುದಾಗಿ ಹೇಳುವ ಈ ಶ್ಲೋಕ ಮಾಧುರ್ಯ ನೋಡಿ ಹೀಗಿದೆ–

> ಉಲೂಖಲೇ ಸಂಭೃತ ತಂಡುಲಾಂಶ್ಚ
> ಸಂಘಟ್ಟಯಂತ್ಯೋ ಮುಸಲೈಃ ಪ್ರಮುಗ್ಧಾಃ
> ಗಾಯಂತಿ ಗೋಪ್ಯೋ ಜನಿತಾನುರಾಗಾ
> ಗೋವಿಂದ ದಾಮೋದರ ಮಾಧವೇತಿ ॥

> ಒರಳಲ್ಲಿ ತುಂಬಿದ ಅಕ್ಕಿ ರಾಶಿಯನು
> ಮುಸಲದಿಂ ಮುಗ್ಧೆಯರು ಕುಟ್ಟುವ ವೇಳೆ
> ಗಾನವ ಮಾಡುವರು ಗೋಪಿಯರು ಪ್ರೇಮದಿಂ
> ಗೋವಿಂದ ದಾಮೋದರ ಮಾಧವಾ ಎಂದು

ಇನ್ನೊಂದು ಸುಂದರ ಚಿತ್ರ, ಕೃಷ್ಣ ಬೆಣ್ಣೆ ಯನ್ನು ಕದಿಯಲು ಬರುತ್ತಾನೆ. ತಾಯಿ ಗೋಪಿಗೆ ಕೃಷ್ಣ ಬಂದರೆ ಕಟ್ಟಿಹಾಕಬೇಕು. ತಕ್ಷಣವೇ ಕೂಗು ಎಂಬುವುದಾಗಿ ಆದೇಶ ನೀಡಿರುತ್ತಾಳೆ. ಕೃಷ್ಣ ಬಂದಾಗ ತಾಯಿಯ ಆದೇಶ ಮರೆಯುತ್ತಾಳೆ. ಕೈಯ್ಯಲ್ಲಿ ಕಾಲಲ್ಲಿ ಘಲಿರೆನ್ನುವ ಕಂಕಣ ಕಿಂಕಿಣಿ, ನಿತಂಬ ವನ್ನಲಂಕರಿಸಿರುವ ಹೇಮ ಸೂತ್ರ. ಮುತ್ತಿನ ಹಾರದಿಂದ ಕಟ್ಟಿರುವ ಕಾಕಪಕ್ಷ, ಕೈಯಲ್ಲಿ

ಕೊಳಲು, ವೈಜಯಂತಿ ಮಾಲೆಯಿಂದ ಮೆರೆಯುವ ವಕ್ಷಸ್ಥಲವುಳ್ಳ ಕೃಷ್ಣನ ರೂಪವನ್ನು ಕಂಡು ಮಂತ್ರಮುಗ್ಧಳಾಗಿ ಆವನ ಕಣ್ಣುಗಳನ್ನು ಪ್ರೇಮ ದಿಂದ ಸವರಿದಳಂತೆ. ಇದನ್ನು ಲೀಲಾಶುಕನು–

ನಿಜಾಂಗನೇ ಕಂಕಣ ಕೇಳೀ ಲೋಲಂ
ಗೋಪೀ ಗೃಹೀತ್ವಾ ನವನೀತ ಗೋಲಂ
ಆಮರ್ದಯತ್ ಪಾಣಿತಲೇನ ನೇತ್ರೇ
ಗೋವಿಂದ ದಾಮೋದರ ಮಾಧವೇತಿ

ಎಂಬುದಾಗಿ ಹಾಡಿದ್ದಾನೆ. ಮತ್ತೆ ಗೋಪಿ ಕೃಷ್ಣನ ಕೈಯ್ಯನ್ನು ಪ್ರೇಮದಿಂದ ಹಿಡಿದಾಗ, ಆ ಗೋಪಿಯು ಕೈ ಕೊಡವಿಕೊಂಡು ಓಡಿದನಂತೆ. ಆಗ ಗೋಪಿಯು ಶ್ರೀಕೃಷ್ಣನನ್ನು ಕುರಿತು

ಹಸ್ತ ಮಾಕ್ಷಿಪ್ಯ ಯಾತೋಽಸಿ
ಬಲಾತ್ಕೃಷ್ಣ ಕಿಮದ್ಭುತಂ
ಹೃದಯಾದ್ಯದಿ ನಿರ್ಯಾಸಿ
ಪೌರುಷಂ ಗಣಯಾಮಿ ತೇ

"ಕೃಷ್ಣ, ನಾನು ಅಬಲೆ, ನೀನಾದರೋ ಪುರು ಷೋತ್ತಮ. ಬಲಾತ್ಕಾರದಿಂದ ನೀನು ನನ್ನ ಕೈಯ್ಯನ್ನು ಕೊಸರಿ ಹೋಗಿರುವಿ. ಇದೇನು ಮಹಾತ್ಕಾರ್ಯ. ನನ್ನ ಹೃದಯದಿಂದ ತಪ್ಪಿಸಿ ಕೊಂಡರೆ ನಿನ್ನ ಪೌರುಷವನ್ನು ಒಪ್ಪುವೆ" ಎಂಬುವ ಸವಾಲಿನ ಮಾತು ಎಷ್ಟು ಹೃದಯ ಸ್ಪರ್ಶಿಯಾಗಿದೆ ನೋಡಿ.

ಶ್ರೀ ಮಹಾಪ್ರಭು ಸಂತ ಚೈತನ್ಯರು ಒಂದೆಡೆ "ಲೀಲಾಶುಕನ ಶ್ರೀಕೃಷ್ಣ ಕರ್ಣಾಮೃತದಂತಹ ಮಹಾಕಾವ್ಯ ರಸಾಸ್ವಾದನೆಯನ್ನು ಮಾಡದಿದ್ದಲ್ಲಿ ಜೀವನದಲ್ಲಿ ಒಂದು ಕೊರತೆ ಇದ್ದೇ ಇರುತ್ತದೆ" ಎಂಬುದಾಗಿ ಹೇಳಿದ್ದಾರೆ. ಕವಿ ಎಲ್ಲಾ ಶ್ಲೋಕ ಗಳಲ್ಲಿ ಕೃಷ್ಣಭಕ್ತಿಯ ದೃಢತೆಯನ್ನು ಅವ್ಯಭಿಚಾರ ಭಕ್ತಿಯ ಶಾಶ್ವತ ಕೀರ್ತಿಯ ಪತಾಕೆಯನ್ನು ಉಳಿಯುವಂತೆ ಮಾಡಿದ್ದಾನೆ. ಕವಿ ವರ್ಣಿಸಿರುವ ಶೃಂಗಾರ ವಿರಹ ಕ್ರೀಡೆಗಳಲ್ಲಿ ಔಚಿತ್ಯವೂ ಸ್ವಾಭಾವಿಕತೆಯೂ ಇವೆ. ದೇವ ಮಾನವರ ಪ್ರೇಮ ಭಕ್ತಿಯ ಅನೇಕ ಪ್ರಕಾರಗಳನ್ನು ಸಮಂ ಜಸಗೊಳಿಸುವುದೇ ಕವಿಯಮುಖ್ಯ ಉದ್ದೇಶವಿರ ಬೇಕು. ಒಟ್ಟಿನಲ್ಲಿ ಕಲಾದೃಷ್ಟಿಯಿಂದಲೂ, ಭಕ್ತಿ ದೃಷ್ಟಿಯಿಂದಲೂ ಕೃಷ್ಣ ಕರ್ಣಾಮೃತವು ಒಂದು ಉತ್ತಮ ಕಾವ್ಯ. ರಾಸಕ್ರೀಡೆಯನ್ನು ವರ್ಣಿಸುವ ಶ್ಲೋಕಗಳನ್ನು ಸಂಗೀತಕ್ಕೆ ನಾಟ್ಯಕ್ಕೆ ಬಹು ಸುಲಭವಾಗಿ ಅಳವಡಿಸಿಕೊಳ್ಳಬಹುದು. ಕವಿ ತನ್ನ ಅಂತಃಕರಣದಲ್ಲಿ ಉಕ್ಕುವ ಉತ್ಕಟ ಪ್ರೇಮ ಭಾವಕ್ಕೆ ತನ್ನ ವಾಙ್ಮಯ ಪ್ರತಿಭೆಯಿಂದ ಜೀವ ನೀಡಿದ್ದಾನೆ. ಕೋಮಲ ಗೋಪಾಲನೂ, ಗೋಪ ಗೋಪಿಕಾ ಗೋ ಸಮೂಹಕ್ಕೆ ನಾಥನೂ ಆದ ಶ್ರೀಕೃಷ್ಣನ ರಾಸಕ್ರೀಡೆಯ ರಂಜನೀಯ ಚಿತ್ರವಂತೂ ಬಹಳ ಹೃದಯಂಗಮವಾಗಿದೆ. ರಾಸಲೀಲೆಯ ಚಿತ್ರವನ್ನು ಕವಿ:–

ಅಂಗನಾ ಮಂಗನಾ ಮಂತರೇ ಮಾಧವೋ
ಮಾಧವಂ ಮಾಧವಂ ಚಾಂತರೇಣಾಂಗನಾ
ಇತ್ಥಮಾ ಕಲ್ಪಿತೇ ಮಂಡಲೇ ಮಧ್ಯಗಃ
ಸಂಜಗೌ ವೇಣುನಾ ದೇವಕೀನಂದನಃ ॥

ಚಾರು ಚಂದ್ರಾವಲೀ
ಲೋಚನೈಃ ಚುಂಬಿತಃ
ಗೋಪ ಗೋ ವೃಂದ
ಗೋಪಾಲಕಾ ವಲ್ಲಭಃ
ವಲ್ಲವೀ ಬೃಂದಬೃಂದಾರಕಃ ಕಾಮುಕಃ
ಸಂಜಗೌ ವೇಣುನಾ ದೇವಕೀನಂದನಃ ॥

(ನಾರೀ ನಾರೀ ನಡುವೆ ಮುರಾರಿ. ಹರಿಗೆ ಹರಿಗೆ ನಡುವೆ ವಯ್ಯಾರಿ. ನರ್ತಿಸಿ ಸ್ತುತಿಸುವ ಗೋ ಗೋವೃಂದ ಗೋಪ ಗೋಪಾಲಿಕೆಯರ ಆನಂದ ಕಂದ ದೇವಕೀನಂದ ಸುಂದರಿಯರ ರಾಸಮಂಡಲ ದಲ್ಲಿ ಕೊಳಲನ್ನು ನುಡಿಸಿ ಎಲ್ಲರ ಮನವನ್ನು ಸೆಳೆದ.)

ನಿತ್ಯವೂ ನಾವು ಈ ಕವಿಯ ಹಲವಾರು ಶ್ಲೋಕ ಗಳನ್ನು ತಮ್ಮ ವ್ಯವಹಾರ ಜೀವನದಲ್ಲಿ ಪಠಿಸಿ ಸ್ತೋತ್ರಮಾಡುವ ಜನವನ್ನು ನಾವು ಕಂಡಿದ್ದೇವೆ. ಈ ಸುಂದರ ಶ್ಲೋಕಗಳ ಮಾಲೆಯನ್ನು ನೋಡಿ–

ಲಕ್ಷ್ಮೀ ಕಲತ್ರಂ ಲಲಿತಾಬ್ಜನೇತ್ರಂ
ಪೂರ್ಣೇಂದು ವಕ್ತ್ರಂ ಪುರುಹೂತಮಿತ್ರಮ್
ಕಾರುಣ್ಯಪಾತ್ರಂ ಕಮನೀಯಗಾತ್ರಂ
ವಂದೇ ಪವಿತ್ರಂ ವಸುದೇವ ಪುತ್ರಂ ॥೧॥

ಮಂದಾರಮೂಲೇ ಮದನಾಭಿರಾಮಂ
ಬಿಂಬಾಧರಾಪೂರಿತ ವೇಣುನಾದಮ್
ಗೋ ಗೋಪ ಗೋಪೀಜನ ಮಧ್ಯಸಂಸ್ಥಂ
ಗೋಪಂ ಭಜೇ ಗೋಕುಲ ಪೂರ್ಣ ಚಂದ್ರಂ

ಕೃಷ್ಣಕರ್ಣಾಮೃತದ ಎರಡನೆಯ ಅಶ್ವಾಸದಲ್ಲಿ ಬರುವ ಈ ಸುಂದರ ಶ್ಲೋಕವನ್ನು ನೀವು ದಿವಂಗತ ಶ್ರೀ ಘಂಟಸಾಲರ ದಿವ್ಯ ಕಂಠದಲ್ಲಿ ಕೇಳಿರಬೇಕು.

ಕಸ್ತೂರೀ ತಿಲಕಂ, ಲಲಾಟಫಲಕೇ
ವಕ್ಷಃಸ್ಥಲೇ ಕೌಸ್ತುಭಂ
ನಾಸಾಗ್ರೇ ನವಮೌಕ್ತಿಕಂ ಕರತಲೇ
ವೇಣುಂ ಕರೇ ಕಂಕಣಂ
ಸರ್ವಾಂಗೇ ಹರಿಚಂದನಂ ಚ ಕಲಯನ್
ಕಂಠೇ ಚ ಮುಕ್ತಾವಳೀ
ಗೋಪಸ್ತ್ರೀ ಪರಿವೇಷ್ಟಿತೋ ವಿಜಯತೇ
ಗೋಪಾಲ ಚೂಡಾಮಣೀ

ಕೃಷ್ಣಕರ್ಣಾಮೃತದ ಮೂರನೆಯ ಅಶ್ವಾಸದಲ್ಲಿ ಬರುವ ಈ ಸುಂದರ ಸ್ತೋತ್ರವನ್ನು ಶ್ರೀಮತಿ ಸುಬ್ಬುಲಕ್ಷ್ಮಿ, ಶ್ರೀ ಬಾಲಮುರಳೀಕೃಷ್ಣ ಹಾಗೂ ಶ್ರೀ ಆರ್. ಕೆ. ಶ್ರೀಕಂಠನ್ ಅವರು ಹಾಡಿರುವು ದನ್ನು ನೀವು ಕೇಳಿರಬೇಕಲ್ಲವೆ ?

"ಸಾಯಂಕಾಲೇ ವನಾಂತೇ ಕುಸುಮಿತ
ಸಮಯೇ ಸೈಕತೇ ಚಂದ್ರಿಕಾಯಾಂ ।
ತ್ರೈಲೋಕ್ಯಾಕರ್ಷಣಾಂಗಂ ಸುರನರ ಗಣಿಕಾ
ಮೋಹನಾಪಾಂಗಮೂರ್ತಿಂ
ಸೇವ್ಯಂ ಶೃಂಗಾರಭಾವೈಃ ನವರಸಭರಿತೈಃ
ಗೋಪಕನ್ಯಾ ಸಹಸ್ರೈಃ
ವಂದೇಽಹಂ ರಾಸಕೇಲೀ, ರತಿಮತಿಸುಭಗಂ
ವಶ್ಯ ಗೋಪಾಲಕೃಷ್ಣಂ"

ಕವಿ ಲೀಲಾಶುಕನು ತನ್ನ ಕಾವ್ಯವನ್ನು ಮುಗಿಸುವ ಮುನ್ನ ವಿದುರನು ಯಾವ ಭಕ್ತಿ, ಕುಂತಿಯಿಂದ ಅರ್ಪಿತವಾದ ಭಕ್ತಿ, ಗೋವರ್ಧನ ಶಿಖರದಲ್ಲಿ, ಕುಚೇಲನ ಅವಲಕ್ಕಿಯಲ್ಲಿ ಯಾವ ಭಕ್ತಿ. ಯಶೋದೆಯ ಮೊಲೆ ಹಾಲಲ್ಲಿ, ಭಾರ ದ್ವಾಜ, ಶಬರಿ ವ್ರಜ ಸುಂದರಿಯರು ಯಾವ ಭಕ್ತಿ ತೋರಿದರೋ ಆ ಪ್ರೀತಿಯಿಂದ ನೀನು ಸಂತಸಗೊಂಡಿರುವಿ. ಅದೇ ಪ್ರೀತಿಯನ್ನು ಈ ನನ್ನ ಕಾವ್ಯಕ್ಕೂ ತೋರಿಸು ಎಂಬುದಾಗಿ ಭಕ್ತಿಯಿಂದ ಬೇಡಿದ್ದಾನೆ.

"ಯಾ ಪ್ರೀತಿರ್ವಿದುರಾರ್ಪಿತೇ,
ಮುರರಿಪೋ ಕುಂತ್ಯರ್ಪಿತೇ ಯಾದೃಶೀ ।
ಯಾ ಗೋವರ್ಧನ ಮೂರ್ಧ್ನಿ
ಯಾ ಚ ಪೃಥುಕೇ ಸ್ತನ್ಯೇ ಯಶೋದಾರ್ಪಿತೇ ।
ಭಾರದ್ವಾಜ ಸಮರ್ಪಿತೇ ಶಬರಿಕಾ
ದತ್ತೇಽಧರೇ ಯೋಷಿತಾಂ ।
ಯಾ ಪ್ರೀತಿರ್ಮುನಿ ಪತ್ನಿಭಕ್ತಿರ ಜಿತೇಽಸ್ಯ
ತ್ರಾಪಿ ತಾಂ ತಾಂ ಕುರು"

—

# ವಾರ್ತಾಲಹರಿ

## ಡಿಸೆಂಬರ್ 1982 ರಲ್ಲಿ ನಡೆದ ಆರ್ಜಿತ ಸೇವೆಗಳು

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಕಳೆದ ವರ್ಷದ ಡಿಸೆಂಬರ್ ತಿಂಗಳನಲ್ಲಿ 462 ಕಲ್ಯಾಣೋತ್ಸವಗಳೂ, 1090 ಪ್ರತ್ಯೇಕ ಕಲ್ಯಾಣೋತ್ಸವಗಳೂ, 107 ಊಂಜಲ್ ಸೇವೆಗಳೂ, 29 ಅಭಿಷೇಕ ಸೇವೆ, 3 ವಸಂತೋತ್ಸವ, 6 ಸಹಸ್ರ ದೀಪಾಲಂಕಾರ ಸೇವೆ, 34 ಬ್ರಹ್ಮೋತ್ಸವಗಳು, 8 ತಿರುಪ್ಪಾವಡಾ, 3 ಬಾಲಾಜಿ ಅರ್ಚನಾಸೇವೆ, 1 ಕೋಯಿಲ್ ಆಳ್ವಾರ್ ತಿರುಮಂಜನ, 1 ಉದಯಾಸ್ತಮಾನ ಸೇವೆಯೂ ನಡೆದವು. ಇದೇ ಕಾಲದಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿ ದರ್ಶನವನ್ನು ಪಡೆದ ಯಾತ್ರಿಕರ ಸಂಖ್ಯೆ 6,03,135 ಆಗಿಯೂ, ಹುಂಡಿ, ಆರ್ಜಿತ ಸೇವೆಗಳೂ, ವಗಪ್ಪಡಿಯೂ ಸೇರಿ ಆದಾಯ ರೂ 1,00,74,586=24 ಆಗಿಯೂ ಇದ್ದಿತು.

## ಸಂದಣಿಯನ್ನು ತಪ್ಪಿಸಲು ಬಳಸು ದಾರಿಯ ಶೀಘ್ರನಿರ್ಮಾಣ

ತಿರುಪತಿಯಲ್ಲಿನ ಹೆಚ್ಚಿನ ವಾಹನ ಜನ ದಟ್ಟಣೆಯನ್ನು ತಪ್ಪಿಸಲು ಯೋಜಿಸಲಾದ ಬಳಸು ದಾರಿಯ ನಿರ್ಮಾಣ ಕಾರ್ಯವನ್ನು ತ್ವರಿತಗೊಳಿಸಲು ತಿ. ತಿ. ದೇ. ಕ್ರಮಗಳನ್ನು ಕೈಗೊಗೊಂಡಿದೆ

ಸರ್ಕಾರ ಒಪ್ಪಿಗೆ ನೀಡಿರುವ ಮಾಸ್ಟರ್ ಪ್ಲಾನಿನ ಪ್ರಕಾರ ಈ ರಸ್ತೆಗಳೆಂದರೆ ರೇಣಿಗುಂಟ ಕಡೆಯಿಂದ ತಿರುಪತಿಯ ಪ್ರವೇಶದಲ್ಲಿರುವ ರೈಲ್ವೆ ಸೇತುವೆಯಿಂದ ಅಲಿಪಿರಿಯವರೆಗಿನ 3.9 ಕಿ.ಮಿ ದೂರದ ರಸ್ತೆ ಹಾಗೂ ಚಿತ್ತೂರು ರಸ್ತೆಯನ್ನು ಆಫೀಸರ್ಸ್ ಕ್ವಾರ್ಟರ್ಸ್ ಬಳಿ ಸೇರುವ ಅಲಿಪಿರಿಯಿಂದ ಉಂಟಾಗುವ 6. ಕಿ ಮೀ. ರಸ್ತೆ. ಈ ರಸ್ತೆಗಳ ನಿರ್ಮಾಣದ ನಂತರ ಬೆಂಗಳೂರು, ಮದರಾಸು, ಹೈದರಾಬಾದು ವಿಜಯವಾಡ ಕಡೆಗಳಿಂದ ಕಾರುಗಳಲ್ಲಿ ಬರುವ ಯಾತ್ರಿಕರು ತಿರುಪತಿಗೆ ಬರದೆಯೇ ತಿರುಮಲೆಗೆ ಹೊರಡಬಹುದು. ಜೊತೆಗೇ ಹಿರಿಯ ವಾಹನಗಳ ಸಂಚಾರವನ್ನು ಬಳಸು ದಾರಿಯ ಮೂಲಕ ಹೊರಡಿಸಬಹುದು. ಆಗ ತಿರುಪತಿಯಲ್ಲಿ ಸಂಚಾರದ ದಟ್ಟಣೆ ಕಡಿಮೆಯಾಗುತ್ತದೆ.

ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾವ್, ಆಸಕ್ತಿಯಿಂದಾಗಿ ತಿ. ತಿ. ದೇ. ಆಡಳಿತ ನಿರ್ವಾಹಕ ಮಂಡಳಿಯ ಅಧ್ಯಕ್ಷ ಶ್ರೀ. ಬಿ. ನಾಗಿರೆಡ್ಡಿ, ಕಾರ್ಯ ನಿರ್ವಹಣಾಧಿಕಾರಿ ಶ್ರೀ ಕುಮಾರಸ್ವಾಮಿ ರೆಡ್ಡಿ, ಪುರಸಭೆಗಳ ಆಡಳಿತ ಶಾಖೆಯಕಾರ್ಯದರ್ಶಿ ಶ್ರೀ ಅಚಂಟ ಆಮರುಗಳ ನಡುವೆ ನಡೆದ ವಿಚಾರವಿನಿಮಯದಿಂದ ಶ್ರೀ ಕುಮಾರಸ್ವಾಮಿರೆಡ್ಡಿ ಯವರು ಈ ರಸ್ತೆಗಳ ಸ್ಥಳವನ್ನು ಪರಿಶೀಲಿಸಿದರು. ತಿರುಪತಿಗೆ ಬರುವ ಯಾತ್ರಿಕರ ಸೌಲಭ್ಯಗಳಿಗಾಗಿ ತಿ ತಿ. ದೇ. ಈಎರಡು ರಸ್ತೆಗಳ ಅಂದಾಜುನಿರ್ಮಾಣ ವೆಚ್ಚವನ್ನು ( ಸುಮಾರು 80 ಲಕ್ಷರೂಗಳು ) ಭರಿಸಲು ಮುಂದಾಗಿದೆ.

## ತಿರುಮಲೆ ಘಾಟ್ ರಸ್ತೆಯಲ್ಲಿ ಚಿರತೆಯ ಉಪಟಳ - ಬಂಧನ

ತಿರುಮಲೆ ತಿರುಪತಿ ದೇವಸ್ಥಾನಗಳ ಘಾಟ್ ರಸ್ತೆಯಲ್ಲಿ ಸಂಚರಿಸುತ್ತ ಎರಡು ವಾರಗಳಕಾಲ ಪ್ರಯಾಣಿಕರನ್ನು ಭಯಭ್ರಾಂತರನ್ನಾಗಿಸಿದ ಚಿರತೆಯನ್ನು ವನ್ಯಮೃಗಸಂರಕ್ಷಣಶಾಖೆಯವರು ಈಚೆಗೆ ಬೋನಿನಲ್ಲಿ ಬಂಧಿಸಿದರು. ಸುಮಾರು ಮೂರುವರೆ ವರ್ಷದ ಈ ಚಿರತೆ ಎರಡೂವರೆ ಅಡಿ ಎತ್ತರವೂ, ನಾಲ್ಕು ಅಡಿ ಉದ್ದವೂ ಇದ್ದು, ಮೊದಲ ಬಾರಿಗೆ ಘಾಟ್‌ರಸ್ತೆಯ ಕಾಲುಹಾದಿಯಲ್ಲಿ ಕಂಡು ಬಂದು ಒಬ್ಬ ತಮಿಳುನಾಡಿನ ಯಾತ್ರಿಕ ತಿ ತಿ. ದೇ. ಗಮನವನ್ನು ಈ ಬಗ್ಗೆ ಸೆಳೆದಿದ್ದನೆಂದು ಹೇಳಲಾಗಿದೆ.

ಈ ಚಿರತೆಯ ಹಾವಳಿಯನ್ನು ನಿವಾರಿಸಲು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಕುಮಾರಸ್ವಾಮಿರೆಡ್ಡಿ, ತಿ. ತಿ. ದೇ. ಫಾರೆಸ್ಟ್ ಕನ್ಸರ್ವೇಟರ್ ಶ್ರೀ ರಾಜಶೇಖರರೆಡ್ಡಿಯವರು ಡಿ. ಎಫ್. ಓ. ವಿದ್ಯಾಸಾಗರ್ ಅವರೊಂದಿಗೆ ಸಮಾಲೋಚಿಸಿ, ಅದನ್ನು ಬಂಧಿಸಬೇಕೆಂದು ತೀರ್ಮಾನಿಸಿ ಅದರ ಚಲನವಲನಗಳನ್ನು ಗಮನಿಸಿ, ಬೋನು ಹಾಕಲು ಕ್ರಮಗಳನ್ನು ಕೈಗೊಂಡರು. ಬೋನಿನಲ್ಲಿಟ್ಟ ಮಾಂಸದ ಎರೆಯನ್ನು ಅದು ಒಮ್ಮೆ ತಿಂದು ಹೋದರೂ, ಮತ್ತೊಮ್ಮೆ ಸಿಕ್ಕಿಬಿದ್ದಿತು.

ಸಾಮಾನ್ಯವಾಗಿ ಹುಲಿಗಿಂತಲೂ ಹೆಚ್ಚು ಚುರುಕು ಬುದ್ಧಿಯ ಚಿರತೆಯನ್ನು ಬಂಧಿಸುವುದು ಕಷ್ಟಸಾಧ್ಯವಾದ ಕೆಲಸವಾದರೂ, ಚಿರತೆಯನ್ನು ಜೀವಸಹಿತವಾಗಿ ಯಾವುದೇ ಗಾಯವಿಲ್ಲದೆ ಬಂಧಿಸಿರುವುದು ಒಂದು ಘನಕಾರ್ಯವೆಂದೇ ಭಾವಿಸಲಾಗಿದೆ. ಸಾಧಾರಣವಾಗಿ ತನಗೆ ಹಾನಿ ಮಾಡದ ಮಾನವರನ್ನು ಕೊಂದು ತಿನ್ನುವ ತತ್ತ್ವ ಚಿರತೆಯದಲ್ಲವೆಂದೂ ಆದ್ದರಿಂದಲೇ ಕಾಲುಹಾದಿಯ ದಾರಿಯಲ್ಲಿ ಯಾರ ಮೇಲೂ ಅದು ಧಾಳಿ ಮಾಡಲಿಲ್ಲವೆಂದೂ ಅರಣ್ಯ ಇಲಾಖೆಯವರು ತಿಳಿಸಿದರು.

ಈ ಚಿರತೆಯನ್ನು ಈಗ ಕರ್ನೂಲಿನ ನಲ್ಲಮಲೈ ಅರಣ್ಯಗಳಲ್ಲಿ ಬಿಡಬೇಕೆಂದು ತಿ. ತಿ. ದೇ. ಅರಣ್ಯ ಇಲಾಖೆಗೆ ಸೂಚಿಸಿದೆ.



# ಆಡಳಿತ ನಿರ್ವಾಹಕ ಮಂಡಲಿಯ ತೀರ್ಮಾನಗಳು

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ ಹಾಗೂ ಅದರ ಉಪದೇವಾಲಯಗಳಲ್ಲಿ (ಶ್ರೀಬೇಡಿ ಆಂಜನೇಯಸ್ವಾಮಿ, ಶ್ರೀಯೋಗ ನರಸಿಂಹಸ್ವಾಮಿ, ಶ್ರೀ ವರದರಾಜಸ್ವಾಮಿ, ಶ್ರೀ ವಾದ್ಯಾರ್, ಅನ್ನಪ್ರಸಾದದ ಪೋಟ್ಟು ಹಾಗೂ ಲಡ್ಡು ಪ್ರಸಾದದ ಪೋಟ್ಟುಗಳ ಶ್ರೀ ಪೋಟ್ಟು ತಾಯಾರ್, ಶ್ರೀ ವಿಶ್ವಕ್ಸೇನ, ರಾಮುಲವಾರಿ ಮೇಡೆಯಲ್ಲಿನ ಆರು ಮೂರ್ತಿಗಳು, ಶ್ರೀ ಜಯ ವಿಜಯರು) ದಿನವೂ ಅಲಂಕರಣಕ್ಕಾಗಿ ಈ ವರೆಗೆ ಚಾಲ್ತಿಯಲ್ಲಿರುವ ದಿನಂಪ್ರತಿ 50 ಕಿಲೋ ತೂಕದ ಹೂವುಗಳ ದಿತ್ತವನ್ನು ದಿನಂಪ್ರತಿ 70 ಕಿಲೋ ಹೂವುಗಳಿಗೆ ಏರಿಸಲಾಯಿತು

× × ×

ತಿ. ತಿ. ದೇ. ಉಪವನ ವಿಭಾಗದ ಫಾರಂ ಮ್ಯಾನೇಜರ್‌ಗಳಲ್ಲಿ ಹಿರಿಯಾದ ಶ್ರೀ ಎಂ. ವಿ. ನಾರಾಯಣರೆಡ್ಡಿಯವರನ್ನು ಅಸಿಸ್ಟೆಂಟ್ ಡೈರೆಕ್ಟರ್ ಆಫ್ ಅಗ್ರಿಕಲ್ಚರ್‌ದರ್ಜೆಗೆ ಏರಿಸಿ, ಆ ಪದವಿಯ ವೇತನಶ್ರೇಣಿ 1050–40–1250–1600 ಯನ್ನು ನೀಡಲು ತೀರ್ಮಾನಿಸಲಾಯಿತು.

× × ×

ತಿ. ತಿ. ದೇ. ಗಳಲ್ಲಿನ ಹಳೆಯದಾದ ಲಾರಿ ಹಾಗೂ ಕಾರುಗಳು ಮತ್ತು ಬಿಡಿಭಾಗಗಳನ್ನು ಹರಾಜಿನ ಮೂಲಕ ಅತಿಹೆಚ್ಚಿನ ಬಿಡ್‌ದಾರರಿಗೆ ನೀಡಿದ ಕ್ರಮವನ್ನು ಅನುಮೋದಿಸುತ್ತ, ಯಾತ್ರಿಕರ ಬೇಡಿಕೆಯಂತೆ ಅವರಿಗೆ ಬಾಡಿಗೆಗೆ ನೀಡಲು ಅನುಕೂಲವಾಗುವಂತೆ ಐದು ಹೊಸ ಕಾರ್‌ಗಳನ್ನು ಕೊಳ್ಳಲು ತೀರ್ಮಾನಿಸಲಾಯಿತು.




## ಹಂಪೆಯಲ್ಲಿ ಪುರಂದರ ಆರಾಧನೋತ್ಸವ

ಧಾರ್ಮಿಕ ವಾತಾವರಣದ ನಡುವೆ ಕರ್ನಾಟಕ ಸಂಗೀತ ಪಿತಾಮಹ ಪುರಂದರ ದಾಸರ ಮೂರು ದಿನಗಳ ಆರಾಧನಾ ಮಹೋತ್ಸವ ಶನಿವಾರ ಆರಂಭವಾದಂತೆ ವಿಶ್ವಪ್ರಸಿದ್ಧ ಹಂಪೆಯ ವಿಸ್ತಾರವಾದ ಕಲ್ಲಿನ ಕಟ್ಟಡಗಳು ಪುರಂದರರ ಕೀರ್ತನೆಗಳನ್ನು ಸುಮಧುರವಾಗಿ ಪ್ರತಿಧ್ವನಿಸಿದುವು.

ಪುರಂದರ ಆರಾಧನೆಯು ದಕ್ಷಿಣ ಭಾರತದ ಹಲವೆಡೆ ಆಚರಿಸಲ್ಪಟ್ಟರೂ, ಪುರಂದರದಾಸರು ತುಂಗ ಭದ್ರೆಯ ದಡದಲ್ಲಿ ಹಾಡುಗಳನ್ನು ರಚಿಸಿ ವಿಠಲನ ನಾಮಸ್ಮರಣೆಯಲ್ಲಿ ನರ್ತಿಸುತ್ತಿದ್ದುದರಿಂದ ಹಂಪೆಯಲ್ಲಿ ಆಚರಿಸುವ ಆರಾಧನಾ ಮಹೋತ್ಸವ ಬಹಳ ಅರ್ಥಪೂರ್ಣವಾದುದು.

ಬೆಂಗಳೂರಿನ ಶ್ರೀ ಪುರಂದರ ಸೇವಾ ಸಮಿತಿಯು ಏರ್ಪಡಿಸಿರುವ ಈ ಉತ್ಸವಕ್ಕೆ ಆಹ್ವಾನಿತರಾಗಿ ಆಗಮಿಸಿದ್ದ ಪ್ರಸಿದ್ಧ ಹರಿಕಥೆ ವಿದ್ವಾಂಸ ಭದ್ರಗಿರಿ ಕೇಶವದಾಸರು ಮಾತನಾಡಿ ಪುರಂದರ ದಾಸರು ಮತ್ತು ತ್ಯಾಗರಾಜರು ಕೇವಲ ಕೀರ್ತನ ರಚನಕಾರರಲ್ಲ, ಮಹಾನ್ ಸಂಗೀತಗಾರರು ಮತ್ತು ಭಕ್ತರು ಎಂದರು.

ಹಂಪೆಯಲ್ಲಿ ಕಳೆದ ಹತ್ತು ವರ್ಷಗಳಿಂದ ಈ ಉತ್ಸವವನ್ನು ನಡೆಸಿಕೊಂಡು ಬರುತ್ತಿರುವುದಕ್ಕೆ ಪುರಂದರ ಸೇವಾ ಸಮಿತಿಯನ್ನು ಅಭಿನಂದಿಸಿದ ಅವರು ಈ ರೀತಿಯ ಆರಾಧನಾ ಮಹೋತ್ಸವವನ್ನು ರಾಷ್ಟ್ರಮಟ್ಟದಲ್ಲಿ ಆಚರಿಸಬೇಕೆಂದು ಕರೆಯಿತ್ತರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಪತ್ರಕರ್ತ ಖಾದ್ರಿ ಶಾಮಣ್ಣನವರು ವೇದ ಉಪನಿಷದ್‌ಗಳ ಸಾರವನ್ನು ಪುರಂದರದಾಸರು ತಿಳಿಯಾದ ಕನ್ನಡದಲ್ಲಿ ಪ್ರಚುರಪಡಿಸಿದರೆಂದು ಹೇಳಿದರು.

ಯುವ ಕಾಂಗ್ರೆಸ್ ನಾಯಕ ಪೌರತ್ ಅಲಿ ಅವರು ಸ್ಮರಣ ಸಂಚಿಕೆ ಬಿಡುಗಡೆ ಮಾಡಿದರು.

ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ಮಂಡಳಿಯ ಉಪನಿರ್ದೇಶಕ ಇಕ್ಬಾಲ್ ಮಹಮದ್ ಅವರು ಮಾತನಾಡಿ ಹಂಪೆಗೆ ಬರಲು ಆಶಿಸುವವರಿಗಾಗಿ ವಿಶೇಷ ಸಾರಿಗೆ ವ್ಯವಸ್ಥೆ ಮಾಡಲಾಗುವುದೆಂದು ತಿಳಿಸಿದರು.

ಸಮಾರಂಭಕ್ಕೆ ಮೊದಲು, ಕರ್ನಾಟಕದ ಹಲವೆಡೆಗಳಿಂದ ಆಗಮಿಸಿದ್ದ ಸಂಗೀತಗಾರರು ಪುರಂದರ ಕೀರ್ತನೆಗಳನ್ನು ಭಜಿಸುತ್ತ ವಿಠಲ ದೇವಾಲಯಕ್ಕೆ ಪ್ರದಕ್ಷಿಣೆ ಹಾಕಿದರು.

ವಿದ್ವಾನ್ ಟಿ. ಎನ್ ಮರಿಯಪ್ಪ ಅವರನ್ನು ಈ ಸಂದರ್ಭದಲ್ಲಿ ಸನ್ಮಾನಿಸಲಾಯಿತು.

ಕೃಪೆ:
ಪ್ರಜಾವಾಣಿ

1983

## ಏಪ್ರಿಲ್ ತಿಂಗಳಿನ ಮುಖ್ಯದಿನಗಳು

| | | |
|---|---|---|
| 7. | ಗುರುವಾರ | ಶ್ರವಣ. |
| 10. | ಭಾನುವಾರ | ವೇದಾಂತ ದೇಶಿಕರ ಉತ್ಸವಾರಂಭ. |
| 14. | ಗುರುವಾರ | ಚಾಂದ್ರಮಾನ ಉಗಾದಿ. ಶ್ರೀ ವೆಂಕಟೇಶ್ವರಸ್ವಾಮಿ ಆಸ್ಥಾನ. |
| 21. | ಗುರುವಾರ | ಶ್ರೀರಾಮನವಮಿ ಆಸ್ಥಾನ. |
| 22. | ಶುಕ್ರವಾರ | ಶ್ರೀರಾಮ ಪಟ್ಟಾಭಿಷೇಕ. |
| 23. | ಶನಿವಾರ | ಶ್ರೀ ಗೋವಿಂದರಾಜಸಾಮಿ ಬ್ರಹ್ಮೋತ್ಸವಾರಂಭ. |
| 25. | ಸೋಮವಾರ | ಶ್ರೀ ವೆಂಕಟೇಶ್ವರಸ್ವಾಮಿ ವಸಂತೋತ್ಸವಾರಂಭ. |
| 26. | ಮಂಗಳವಾರ | ಚಿತ್ರಾ ಪೂರ್ಣಿಮೆ, ಶ್ರೀ ವೆಂಕಟೇಶ್ವರಸ್ವಾಮಿ ರಜತ ರಥೋತ್ಸವ. |
| 27. | ಬುಧವಾರ | ಶ್ರೀ ವೆಂಕಟೇಶ್ವರಸ್ವಾಮಿ ವಸಂತೋತ್ಸವ ಸಮಾಪ್ತಿ. ನಾಗಲಾಪುರ ಶ್ರೀ ವೇದನಾರಾಯಣಸ್ವಾಮಿ ಬ್ರಹ್ಮೋತ್ಸವಾರಂಭ, ಧ್ವಜಾರೋಹಣ. |

**ಮುಂದಿನ ಸಂಚಿಕೆಯಲ್ಲಿ .... .... . .**

**ಸಪ್ತಗಿರಿ — ಏಪ್ರಿಲ್ 1983**

**ರಾಮಾಯಣದ ಇತಿಹಾಸ**
– ಡಾ॥ ಎನ್. ಅನಂತರಂಗಾಚಾರ್

**ಭರತನ ಭಕ್ತಿ**
– ಎಸ್. ನರಸಿಂಹಾಚಾರ್ಯ

**ವಾಲ್ಮೀಕಿಯ ಸುಭಾಷಿತಗಳು**
– ಆರ್. ಗುರುರಾಜಗುಡಿ

**ಶಿಲ್ಪ ರಾಮಾಯಣ**
– ಪಿ. ಕೃಷ್ಣಮೂರ್ತಿ

**ಆದಿಕಾವ್ಯದಲ್ಲಿ ಉಪಮಾಲಂಕಾರ**
– ಬ. ನ. ಗುಂಡೂರಾವ್

**ವ್ಯಾಸರಾಯರು - ಆಂಜನೇಯ**
– ಕೆ. ಆರ್. ನರಸಿಂಹನ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

## ಜಾನಪದ ಅಕ್ಯಾಡೆಮಿ ಪ್ರಶಸ್ತಿಗಳು

ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕ್ಯಾಡೆಮಿಯ 1982 ನೆಯ ಸಾಲಿನ ಪ್ರಶಸ್ತಿಗಳನ್ನು ಕೆಳಕಂಡ ಹದಿನಾರು ಮಂದಿಗೆ ನೀಡಿದೆ.

ಎಂ. ನಂಜುಡಪ್ಪ (ಯಕ್ಷಗಾನ), ಮುಖ ವೀಣೆ ಮಾಯಣ್ಣ (ಮುಖ ವೀಣೆ), ಸಿದ್ಧಲಿಂಗಪ್ಪ (ಮರಣೋತ್ತರ ಪ್ರಶಸ್ತಿ – ಯಕ್ಷಗಾನ) ವಾದ್ಯ ಚಲುವಟ್ಟು ಚಿಟ್‌ಲೋಳ ಗೋವಿಂದ ಗೌಡ (ಅಂಟಿಕೆ ಪಂಟಿಕೆ), ಶ್ರೀಮತಿ ಸಿರಿಯಮ್ಮ (ಹಾಡುಗಾರಿಕೆ), ಮಾದಣ್ಣ ಓಲೇಕಾರ (ಲಾವಣಿ), ಶ್ರೀಮತಿ ಸಾವಿತ್ರಿ ಭೀಮವ್ವ ಪತ್ರೋಟಿ (ಕೃಷ್ಣ ಪಾರಿಜಾತ), ಶ್ರೀಮತಿ ಅಚ್ಚಮ್ಮ ಸೀತಾರಾಮ ಭಟ್ಟ (ಹಾಡುಗಾರಿಕೆ), ಶಿವಶರಣಪ್ಪ ಬಸವಣ್ಣಪ್ಪ ನಾಟಕಾರ (ಲಾವಣಿ), ಕಿಳ್ಳೇಕ್ಯಾತರ ದೊಡ್ಡ ಭರಮಪ್ಪ (ತೊಗಲು ಗೊಂಬೆ), ರಾಮ ನಾರಾಯಣ ಹೆಗಡೆ (ಯಕ್ಷಗಾನ), ಶಾಂತಪ್ಪ ಶೀಲವಂತ (ಲಾವಣಿಗೆ), ಹನುಮನಗೌಡ ರಾಮನಗೌಡ ಜೀವನಗೌಡರ (ಸೂತ್ರದ ಬೊಂಬೆ), ಹಾರಾಡಿ ನಾರಾಯಣ ಗಾಣಿಗ (ಯಕ್ಷಗಾನ) ಮತ್ತು ಕ.ರಾ. ಕೃಷ್ಣಸ್ವಾಮಿ (ಕ್ಷೇತ್ರಕಾರ್ಯ).

ಮಾರ್ಚಿ 26 ಮತ್ತು 27ರಂದು ನಗರದಲ್ಲಿ ನಡೆಯಲಿರುವ ಅಕ್ಯಾಡೆಮಿ ಪ್ರಶಸ್ತಿ ಪ್ರಧಾನ ಸಮಾರಂಭದಲ್ಲಿ ಈ ಕಲಾವಿದರುಗಳಿಗೆ ಒಂದು ಸಾವಿರ ರೂಗಳ ಗೌರವ ಧನ ನೀಡಿ ಶಾಲು ಹೊದಿಸಿ ಸನ್ಮಾನಿಸಲಾಗುವುದು.

ಇದೇ ಸಂದರ್ಭದಲ್ಲಿ 1980ರ ಸಾಲಿನಲ್ಲಿ ಪ್ರಕಟವಾದ ಅತ್ಯುತ್ತಮ ಗ್ರಂಥಗಳಿಗೆ ನಗದು ಬಹುಮಾನ ನೀಡಲಾಗುವುದು ಹಾಗೂ ಅಕ್ಯಾಡೆಮಿಯು ಸಿದ್ಧಗೊಳಿಸಿರುವ "ಗಾದೆಗಳು" ಎಂಬ ಪುಸ್ತಕವನ್ನು ಬಿಡುಗಡೆ ಮಾಡಲಾಗುವುದು.

ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕ್ಯಾಡೆಮಿಯ ಅಧ್ಯಕ್ಷ ಎಚ್. ಎಲ್. ನಾಗೇಗೌಡ ಅವರು ಪತ್ರಿಕಾ ಗೋಷ್ಠಿಯಲ್ಲಿ ಈ ವಿವರಗಳನ್ನು ನೀಡಿದರು.

ಕೃಪೆ :
ಕನ್ನಡ ಪ್ರಭ

ಮುಖಚಿತ್ರ : ಶ್ರೀನಿವಾಸನ ಸೇವೆಯಲ್ಲಿ ಅನ್ನಮಯ್ಯ

ಕಲೆ : ಕೆ. ಜಗದೀಶ್

ನಾಲ್ಕನೆಯ ರಕ್ಷಾಪುಟ : ಶ್ರೀವೇದ ನಾರಾಯಣ ಸ್ವಾಮಿದೇವಾಲಯ

Edited and Published on behalf of the T. T. Devasthanams by K. Subba Rao, M. A., and Printed at
T. T. D. Press by M. Vijayakumar Reddy, Manager, T. T. D. Press, Tirupati - 517 501.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

| | |
|---|---|
| ವಿಶೇಷ ಪ್ರವೇಶ (ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸಂತಿಯಸಾಲಿನಲ್ಲಿ ಸೇರುವಿಕೆ) | ರೂ 25–00 |
| ಸುಪ್ರಭಾತ | ರೂ 25–00 |

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ[1] | ರೂ 400 |
| 2 | ಅಭಿಷೇಕ* | ರೂ 500 |
| 3 | ಪುನುಗು* | ರೂ 200 |
| 4 | ಜಾಫ್ರಾ* | ರೂ 100 |
| 5 | ಕಸ್ತೂರಿ* | ರೂ 100 |
| 6. | ಸಹಸ್ರಕಲಶಾಭಿಷೇಕ | ರೂ 3500 |
| 7. | ತಿರುಪ್ಪಾವಡಾ[2] | ರೂ 5000 |
| 8. | ಕೋಯಿಲ್ ಆಳ್ವಾರ್ ತಿರುಮಂಜನ | ರೂ 3000 |
| 9 | ಮುಕುರ ಮಂಟಪದಲ್ಲಿ ಡೋಲೋತ್ಸವ[2] | ರೂ 1500 |
| 10. | ಸಹಸ್ರದೀಪಾಲಂಕಾರ ಸೇವೆ | ರೂ 2000 |

### ಉತ್ಸವಗಳು

| | |
|---|---|
| ಪುಷ್ಪಯಾಗ | ರೂ 3500 |
| ವಸಂತೋತ್ಸವ | ರೂ 3000 |
| ಕಲ್ಯಾಣೋತ್ಸವ | ರೂ 2000 |
| ಬ್ರಹ್ಮೋತ್ಸವ | ರೂ 1000 |
| ತೆಪ್ಪೋತ್ಸವ[2] | ರೂ 2500 |
| ಪವಿತ್ರೋತ್ಸವ | ರೂ 5000 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1. ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.

* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ.

2. ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು.

ವಿವರಗಳಿಗೆ: **ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ

ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

---

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ 75–00 |
| ಟಿ.ಬಿ ಸಿ ಒಳಗಿನ ಕಾಟೇಜುಗಳು | ” | ರೂ 50–00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮಧ್ಯೆಯ. ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್. ಜಿ. ಕಾಟೇಜು | ,, | ರೂ 150–00 |
| <u>ಮದುವೆಯ ಹಾಲ್‌ಗಳು</u> | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ.ಸಿ. ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. ಪೂರ್ವ ನಂ. 9 | ,, | ರೂ 50–00 |
| ಎ.ಟಿ ಸಿ. ನಂ. 39 | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20–00 |
| ಶೇಷಾದ್ರಿನಗರ ,, | ,, | ರೂ 20–00 |
| ಅಂಜನಾದ್ರಿನಗರ ,, | ,, | ರೂ 20–00 |
| ಗರುಡಾದ್ರಿನಗರ ,, | ,, | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ ಟಿ.ಡಿ. ತಿರುಮಲೆ

### ತಿರುಪತಿ

| | |
|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳಕೋಣೆ | ರೂ 20–00 |
| ನಾಲ್ಕು ” | ರೂ 25–00 |
| ಒಂದು ” | ರೂ 15–00 |
| ಶ್ರೀ ಪದ್ಮಾವತಿ ಅತಿಥಿಗೃಹ | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 50–00 |
| ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | |
| ಎರಡು ಹಾಸಿಗೆಗಳ ಕೋಣೆ | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ ದೇ. ಗಳದ್ದು.

ತಿರುಮಲೆ ತಿರುಪತಿ ದೇವಸ್ಥಾನ.

